ಜೂನ್ 1 ರಿಂದ 30, 2002 (ಬೇಶ 18-31, ಕಾರ್ತಿಕ್ 1-17)

# ಪಾಕ್ಷಿಕ ಪತ್ರಿಕೆ

ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 5-6 ಪುಟಗಳು : 24 ಬೆಲೆ ರೂ. : 12-00



ಲೇಖನ : ಒಳಪುಟದಲ್ಲಿ.

**ಕೊಡಗು- ಮಂಡ್ಯ ಜನತೆಯ ಸ್ನೇಹ ಸಂಬಂಧ ಮಂಡ್ಯದಲ್ಲಿ ಕೆಪಿಸಿಸಿ ಸದಸ್ಯ ಎಸ್. ಎಂ. ಶಂಕರ್ ಕಾವೇರಿ ಮಾತೆಗೆ ಪೂಜಿಸಿ ಉತ್ಸವಕ್ಕೆ ಚಾಲನೆ ನೀಡಿದರು.**

## ಕೊಡಗು ಎಜುಕೇಶನಲ್ ಅಕಾಡೆಮಿ, ಬೆಂಗಳೂರು, ವತಿಯಿಂದ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನಾಂಗದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸನ್ಮಾನ.

SSLC ಹಾಗೂ PUC ಯಲ್ಲಿ 2001-2002ನೇ ಸಾಲಿನಲ್ಲಿ 75%ಮತ್ತು ಹೆಚ್ಚು ಅಂಕ ಗಳಿಸಿದ ಜನಾಂಗದ ವಿದ್ಯಾರ್ಥಿಗಳನ್ನು ರಾಜ್ಯ ಮಟ್ಟದ ಅಥವ ರಾಷ್ಟ್ರ ಮಟ್ಟದ ಗಣ್ಯ ವ್ಯಕ್ತಿಗಳಿಂದ ಸನ್ಮಾನಿಸಲು ಬೆಂಗಳೂರಿನಲ್ಲಿರುವ ಕೊಡಗು ಎಜುಕೇಶನಲ್ ಅಕಾಡೆಮಿ ನಿರ್ಧರಿಸಿದೆ. ಹೊರ ಊರುಗಳಿಂದ ಬಂದು ಹೋಗುವ ಬಸ್ಸ್ ಅಥವ ರೈಲ್ವೆ ವೆಚ್ಚವನ್ನು ನೀಡಲಾಗುವುದು. (ಸನ್ಮಾನಿತರಿಗೆ ಮಾತ್ರ) ಆಸಕ್ತರು ತಮ್ಮ ಪೂರ್ಣ ಮಾಹಿತಿಯ ಜೆರಾಕ್ಸ್ ಪ್ರತಿಯನ್ನು ಅಂದರೆ ಕುಟುಂಬದ ಹೆಸರು, ತಂದೆ ಹೆಸರು, ಊರು, ಇತ್ಯಾದಿಯನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸುವಂತೆ ಸಂಸ್ಥೆಯ ಕಾರ್ಯದರ್ಶಿ ಮೊಟ್ಟನ ರವಿಕುಮಾರ್ ತಿಳಿಸಿರುತ್ತಾರೆ.

*ವಿಳಾಸ*:- **Kodagu Educational Acadamy (R)**

**No. 413, Cauvery Nagar, R.T. Nagar Post, Bangalore - 560 032 Phone: 080/3539555**



## ಉನ್ನತ ಶ್ರೇಣಿಯಲ್ಲಿ ತೇರ್ಗಡೆ

ಕುಮಾರಿ ಜೈನೀರ ಡಿ. ಬಿಂದಿಯಾ (ಟೀನಾ), ಬೆಂಗಳೂರು ವಿಜಯನಗರ ಬಡಾವಣೆಯ ನ್ಯೂ ಕೇಂಬ್ರಿಡ್ಜ್ ಶಾಲೆಯ ಈ ಸಾಲಿನ 7ನೇ ತರಗತಿ ಪಬ್ಲಿಕ್ ಪರೀಕ್ಷೆಯಲ್ಲಿ ಶೇಕಡ 94.6 (ಒಟ್ಟು 600 ಅಂಕಗಳಿಗೆ 568 ಅಂಕ) ವಿಜ್ಞಾನದಲ್ಲಿ 99 ಅಂಕ ಗಳಿಸಿ ತೇರ್ಗಡೆಯಾಗಿರುವುದು ತಂದೆ ಜೈನೀರ ಧನಂಜಯ, ತಾಯಿ ಲಕ್ಷ್ಮಿ ಮತ್ತು ಅಕ್ಕ ವಿಮಲ (ಟಿಂಕು) ಮತ್ತು ಬಂಧುಮಿತ್ರರಿಗೆ ಅತೀವ ಸಂತೋಷ ತಂದಿದೆ.

**ಶುಭಾಶಯಗಳೊಂದಿಗೆ,**

ಪ್ರಕಟಣೆ :ಗೌಡ ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು

## ಅಭಿನಂದನೆ

2001-2002ನೇ ಸಾಲಿನ 7ನೇ ತರಗತಿ ಪಬ್ಲಿಕ್ ಪರೀಕ್ಷೆಯಲ್ಲಿ ಮಡಿಕೇರಿ ನಗರದ ಸೈಂಟ್ ಜೋಸೆಫ್ ಕಾನ್ವೆಂಟಿನ ಅವಳಿ ಸಹೋದರಿಯರಾದ ಶ್ವೇತ ವಿಶ್ವನಾಥ್ ಮತ್ತು ಶೃತಿ ವಿಶ್ವನಾಥ್ ಕ್ರಮವಾಗಿ 95.5% ಹಾಗೂ 94% ಅಂಕಗಳಿಸಿ ತೇರ್ಗಡೆಯಾಗಿರುವರು. ಇವರ ಮುಂದಿನ ಭವಿಷ್ಯಕ್ಕೆ ಶುಭ ಹಾರೈಸುವೆವು.

**ಶುಭಾಶಯಗಳೊಂದಿಗೆ,**

ತಂದೆ :ಶ್ರೀಮತಿ ಮತ್ತು ಶ್ರೀ ಕೊಡೆಕಲ್ಲು ವಿಶ್ವನಾಥ್
ಫೇರ್ ಟ್ರೇಡರ್ಸ್, ರೇಸ್ ಕೋರ್ಸ್ ರಸ್ತೆ,
ಸುಲ್ತಾನ್ ಬಿಲ್ಡಿಂಗ್, ಮಡಿಕೇರಿ

## ಶ್ಲಾಘನೀಯ ಕಾರ್ಯ

***ಸಂಪಾದಕೀಯವರೆ,***

ನಮ್ಮ ನಿಮ್ಮ ಪತ್ರಿಕೆಯಾದ ಕೊಡಗು ಸಂಗಾತಿ ಪತ್ರಿಕೆಯಲ್ಲಿ ಜನಾಂಗದ ಹಿರಿಯರನ್ನು, ಕಾಲ ಕಂಡವರನ್ನು, ಪ್ರತಿಭಾವಂತರನ್ನು ಗುರುತಿಸಿ ಪರಿಚಯಿಸುತ್ತಿರುವ ನೀವು ಉತ್ತಮ ಕಾರ್ಯವನ್ನು ಹಮ್ಮಿಕೊಂಡಿರುವುದು ನಿಜಕ್ಕೂ ನಮಗೆಲ್ಲರಿಗೂ ಹೆಮ್ಮೆಯ ವಿಚಾರವಾಗಿದೆ. ಸಂಗಾತಿ ಪತ್ರಿಕೆಯು ನಮ್ಮ ಚೆಲುವ ನಾಡಿನ ಕನ್ನಡಿಗರೆಲ್ಲರೂ ಓದುವಂತೆ ಆಗಲಿ, ಸಂತೋಷಪಡುವಂತಾಗಲಿ, ಇನ್ನು ಹೆಚ್ಚಿನ ಚಂದದಾರರನ್ನು ಪಡೆದು ಅಗ್ರಸ್ಥಾನಕ್ಕೇರಲಿ ಎಂಬುದೆ ನನ್ನ ಆಶಯವಾಗಿದೆ. ಹಾರೈಕೆಯೊಂದಿಗೆ,

**- ಕೂಡಕಂಡಿ ಕಾವೇರಮ್ಮ ಸೋಮಣ್ಣ,**
**ಪುರಸಭಾಧ್ಯಕ್ಷರು, ಮಡಿಕೇರಿ**

## ಪೋಸ್ಟಲ್ ವಿನಾಯಿತಿ : ಚಂದದಾರರ ಅವಗಾಹನೆಗೆ :

ಪೋಸ್ಟಲ್ ಡಿಪಾರ್ಟ್‌ಮೆಂಟ್‌ನ ಭಾರತ ಸರ್ಕಾರದ ಪತ್ರ 21-9-2001 ದಿನಾಂಕ 18-10-2001ಪ್ರಕಾರ ರಿಜಿಸ್ಟರ್ ನ್ಯೂಸ್ ಮ್ಯಾಗಜೀನ್ಸ್‌ಗಳು ಇನ್ನು ಮುಂದಕ್ಕೆ ತೀರಾ ಇತ್ತೀಚೆಯ ಕನಿಷ್ಠ 50% ಸುದ್ದಿಯನ್ನು ಪ್ರಕಟಿಸುವಂತೆ ತಿಳಿಸಿದೆ. ಇದರ ಅನ್ವಯ ಈ ಮೇಲಿನಂತೆ ಪ್ರಕಟಿಸಲು ವಿಫಲವಾದಲ್ಲಿ ಅಂಚೆ ವಿನಾಯಿತಿ ರದ್ದು ಪಡಿಸಲಾಗುವುದೆಂದು ಸಹ ತಿಳಿಸಿದ್ದಾರೆ. ಆದ್ದರಿಂದ ಸಂಗಾತಿ ಓದುಗರು ದಯವಿಟ್ಟು ತಮ್ಮ ಆಸುಪಾಸಿನಲ್ಲಿ ಆಗುತ್ತಿರುವ ವಿಷಯವನ್ನು ಕಳುಹಿಸುವಂತೆ ವಿನಂತಿ. ಈ ಮೇಲಿನ ವಿನಾಯಿತಿ ರದ್ದಾದರೆ ಪತ್ರಿಕೆಗೆ ಈಗಿರುವ 25ಪೈಸೆ ಅಂಚೆ ಚೀಟಿ ಬದಲು ಐದು ರೂಪಾಯಿ ಅಂಚೆ ಚೀಟಿ ಹಾಕಬೇಕಾದಾಗ ಪತ್ರಿಕೆಯು ಖಾಸಗಿ ಪತ್ರವಾಗಿ ಪತ್ರಿಕೆ ನಡೆಯಿಸಲು ಅಸಮರ್ಥರಾಗುವೆವು.

**- ಸಂಗಾತಿ**



# 2002, ಜೂನ್ 1 ರಿಂದ 30ರ ತನಕ

ಒಳನೋಟ




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | ಕೊಡಗು ಸಂಗಾತಿ, ದೊಡ್ಡಣ್ಣ ಬಿಲ್ಡಿಂಗ್, ಹುಣಸೂರು ರಸ್ತೆ, ಅಂಚೆ ಕಛೇರಿ ಎದುರು, ಹಿನಕಲ್ ಅಂಚೆ, ಮೈಸೂರು - 17. ಫೋನ್: 0821/404290 |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : 08272/228047<br>ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
| ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/56591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 12ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ :

## ಆಸ್ತಿ ಮಾರಾಟದ ನೋಂದಣಿಯಲ್ಲಿ ಭಾವಚಿತ್ರ ಲಗತ್ತಿಸುವ ಬಗ್ಗೆ:-

ಕರ್ನಾಟಕ ಸರ್ಕಾರದವರು ಈಗ್ಯೆ ಕೆಲವು ದಿನಗಳ ಹಿಂದೆ ಯಾವುದೇ ಕ್ರಯಪತ್ರವನ್ನು ನೋಂದಣಿ ಅಧಿಕಾರಿಗಳ ಕಛೇರಿಯಲ್ಲಿ ನೋಂದಾಯಿಸಿಕೊಳ್ಳ ಬೇಕಾದರೆ ಕ್ರಯಕ್ಕೆ ಕೊಡುವವರ ಭಾವಚಿತ್ರ, ಕ್ರಯಕ್ಕೆ ಪಡೆದುಕೊಳ್ಳುವವರ ಭಾವಚಿತ್ರ ಮತ್ತು ಗುರುತು ಹೆಚ್ಚುವವರ ಭಾವಚಿತ್ರವನ್ನು ಕ್ರಯಪತ್ರವು ಸಾಮಾನ್ಯ ಅಧಿಕಾರ ಪತ್ರದ ಮುಖಾಂತರವಾದರೆ ಸಾಮಾನ್ಯ ಅಧಿಕಾರ ಹೊಂದಿದವರ ಭಾವಚಿತ್ರವನ್ನು ಲಗತ್ತಿಸಬೇಕೆಂದು ಆಜ್ಞೆಯನ್ನು ಹೊರಡಿಸಿರುವುದರಿಂದ ಕ್ರಯಕ್ಕೆ ಕೊಡುವ ಹಾಗೂ ಪಡೆದುಕೊಳ್ಳುವವರಿಗೆ ಹಲವಷ್ಟು ತೊಂದರೆಯಾಗಿದೆ.

ಉದಾಹರಣೆಗೆ ಬೆಂಗಳೂರು, ಮೈಸೂರು ಮುಂತಾದ ನಗರಗಳ ಆಸುಪಾಸಿನ ನಿವೇಶನದಾರರು ಸಾಮಾನ್ಯ ಅಧಿಕಾರ ಪಡೆದು ಹಲವಾರು ವರ್ಷಗಳಾಗಿದ್ದು ನಿವೇಶನಗಳ ಸಾಮಾನ್ಯ ಅಧಿಕಾರ ವರ್ಷಗಳಾಗಿದ್ದು, ಕೊಟ್ಟವರು ಊರು ಬಿಟ್ಟು ಬೇರೆ ಊರಿಗೆ ಹೋಗಿದ್ದರೆ, ಅಂತಹವರನ್ನು ಈಗ ರಿಜಿಸ್ಟರ್ ಮಾಡುವ ಸಮಯದಲ್ಲಿ ಹುಡುಕಿ ಅವರ ಭಾವಚಿತ್ರವನ್ನು ಲಗತ್ತಿಸುವುದು ಎಂದರೆ ಬಹಳ ತ್ರಾಸದ ಕೆಲಸವೇ ಸರಿ. ಈರೀತಿಯ ವ್ಯವಸ್ಥೆ ಜಮೀನು ಮಾರುವ ಹಾಗೂ ಕೊಂಡುಕೊಳ್ಳುವ ವ್ಯವಸ್ಥೆಗೆ ದೊಡ್ಡ ಪೆಟ್ಟೇ ಸರಿ. ಭಾವಚಿತ್ರ ಅಳವಡಿಸುವ ಕ್ರಮ ಬೆಂಗಳೂರು ಪ್ರಾಧಿಕಾರದಲ್ಲಿರುವಂತೆ ಖಾಸಗಿ ಜಮೀನುಗಳಿಗೆ ಅಳವಡಿಸಿದರೆ ಜನರು ತುಂಬಾ ಸಂಕಷ್ಟಕ್ಕೆ ಗುರಿಯಾಗುವರೆಂದು ಸಂಗಾತಿಯ ಅಭಿಪ್ರಾಯವಾಗಿದೆ.

## ಶುಭ ವಿವಾಹ

1.ಸೋಮವಾರ ಪೇಟೆ ತಾಲೂಕು ಮಸಗೋಡು ಗ್ರಾಮದ ನಂಗಾರು ಸುಬ್ಬಯ್ಯನವರ ಮಗಳು ಭಾರತಿಗೂ ಮತ್ತು ನರಿಯಂದಡ ಗ್ರಾಮದ ಪೊಕ್ಕುಲಂಡ್ರ ವಸಂತನವರ ಮಗ ಮನೋಹರ್‌ನ ವಿವಾಹವು ದಿನಾಂಕ 6-5-2002 ನೇ ಸೋಮವಾರ ಮಡಿಕೇರಿಯಲ್ಲಿರುವ ಮೇಲಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ಕಳೆಯಿತೆಂದು ತಿಳಿದು ಬಂದಿದೆ.

2.ಬೆಂಗಳೂರು ನಿವಾಸಿ ಎಡಿಕೇರಿ ದಿ|| ಸುಬ್ರಾಯನವರ ಮಗ ಸುದರ್ಶನ್‌ನಿಗೂ ಮತ್ತು ಬೆಂಗಳೂರು ಯಶವಂತಪುರ ಕಾಸ್ಬಾಡಿ ಮಲ್ಲಪ್ಪ ಗೌಡರ ಮಗಳು ದೀಪಾಳ ವಿವಾಹವು ದಿನಾಂಕ 19-5-2002 ನೇ ಭಾನುವಾರ ಬೆಂಗಳೂರು ಚಿಕ್ಕಬಾಣಾವರ ರಸ್ತೆಯಲ್ಲಿರುವ ಗಂಗಾಧರಯ್ಯ ಕಲ್ಯಾಣ ಮಂಟಪದಲ್ಲಿ ಕೊಡಗಿನ ಪದ್ಧತಿಯಂತೆ ಬಹಳ ಗೌಜಿಯಾಗಿ ಕಳೆಯಿತು.

3.ಮಕ್ಕಂದೂರು ಗ್ರಾಮದ ಕುಂಭಗೌಡನ ದಿ|| ಮಾಚಯ್ಯನವರ ಮಗ ಭವಾನಿ ಶಂಕರನಿಗೂ ಮತ್ತು ಕೋಣನ ಕಟ್ಟೆ, ಸುಳುಗೋಡು ಗ್ರಾಮದ ಉಪ್ಪಂಡಿರ ಮೊಣ್ಣಪ್ಪನವರ ಮಗಳು ಪುಷ್ಪವಾಣಿಯ ವಿವಾಹವು ದಿನಾಂಕ 17-5-2002 ನೇ ಶುಕ್ರವಾರ ಮಡಿಕೇರಿ ಕೆಳಗಿನ ಗೌಡ ಸಮಾಜದಲ್ಲಿ ಬಹಳ ವಿಜೃಂಭಣೆಯಿಂದ ಕಳೆಯಿತು.

4.ಮೈತಾಡಿ ಗ್ರಾಮದ ಮುಂಡಚಂಡೀರ ಸೋಮಯ್ಯನವರ ಮಗಳು ಅಮಿತಾಳಿಗೂ ಮತ್ತು ಕಾವಡಿ ಗ್ರಾಮದ ಮಂಡೆಪಂಡ ಮೇದಪ್ಪನವರ ಪುತ್ರ ಅಪ್ಪಯ್ಯನ ವಿವಾಹ ತಾರೀಖ್ 16-5-2002 ರಲ್ಲಿ ಅಮ್ಮತ್ತಿ ಕೊಡವ ಸಮಾಜದಲ್ಲಿ ಬಹು ವಿಜೃಂಭಣೆಯಿಂದ ಕಳೆಯಿತು ಎಂದು ತಿಳಿದುಬಂದಿದೆ.

5.ಕುಶಾಲನಗರ ನಿವಾಸಿ ಐಯ್ಯಂಡ್ರ ಯಾದವನವರ ಮಗಳು ಕವಿತಾಳಿಗೂ ಮತ್ತು ಬಾಳಗೋಡು ನಿವಾಸಿ ಚೈನೀರ ಹರಿಶ್ಚಂದ್ರನವರ ಮಗ ನಾಗೇಶ್‌ನ ವಿವಾಹವು ದಿನಾಂಕ 26-5-2002 ನೇ ಭಾನುವಾರ ಕುಶಾಲನಗರ ಗೌಡ ಸಮಾಜದಲ್ಲಿ ಸುಗಮವಾಗಿ ಕಳೆಯಿತೆಂದು ತಿಳಿದು ಬಂದಿದೆ.

6.ಮೈಸೂರು ನಿವಾಸಿ ಶಂಕರನ ಬಸಪ್ಪನವರ ಪ್ರಥಮ ಪುತ್ರಿ ಜ್ಯೋತಿಗೂ ತಣ್ಣಿಮಾನಿ ಗ್ರಾಮದ ಕುದುಪಜೆ ಆನಂದನವರ ಮಗ ಲವಕುಮಾರನ ವಿವಾಹವು ದಿನಾಂಕ 30-5-2002 ನೇ ಗುರುವಾಗ ಭಾಗಮಂಡಲ ಗೌಡ ಸಮಾಜದಲ್ಲಿ ಹಳೆ ಪದ್ಧತಿ ಪ್ರಕಾರ ಬಹಳ ಚೆನ್ನಾಗಿ ಕಳೆಯಿತು.

7.ಭಾಗಮಂಡಲ ಚೇರಂಗಾಲ ಗ್ರಾಮದ ಹೊಸೂರು ಜೋಯಪ್ಪನವರ ಪುತ್ರ ಸತೀಶ್ ಕುಮಾರನಿಗೂ ಮತ್ತು ಸೋಮವಾರ ಪೇಟೆ ಕಾಜೂರು ಗ್ರಾಮದ ಕಾಳೇರಮ್ಮನ ಗೋಪಾಲ ಕೃಷ್ಣನವರ ಪುತ್ರಿ ಸೌಮ್ಯಳಿಗೂ ದಿನಾಂಕ 20-5-2002ರಲ್ಲಿ ಮಡಿಕೇರಿಯಲ್ಲಿರುವ ಗೌಡ ಸಮಾಜ ಕಲ್ಯಾಣ ಮಂಟಪದಲ್ಲಿ ಬಾರಿ ಚೆನ್ನಾಗಿ ಕಳೆಯಿತು.

8.ಹೆರವನಾಡು ಗ್ರಾಮದ ಕಲ್ಲಂಬಿರ ದಿ|| ವೆಂಕಪ್ಪನವರ ಪುತ್ರ ನಾಣಯ್ಯನಿಗೂ ಮತ್ತು ಸದ್ರಿ ಗ್ರಾಮದ ಬೋಳನ ಬೋಜಪ್ಪನವರ ಪುತ್ರಿ ಡಿಲಿತಳ ವಿವಾಹವು 27-5-2002 ರಂದು ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ಚೆನ್ನಾಗಿ ನಡೆಯಿತು.

9.ಮದೆ ಗ್ರಾಮದ ಪಟ್ಟಡ ದಿ|| ಮಾದಪ್ಪನವರ ಪುತ್ರ ನೀಲಾಧರನಿಗೂ ಮತ್ತು ಕೂಡಿಗೆಯ ಮುಲೆಮಜಲು ದಿ|| ಕಾಳಪ್ಪನವರ ತೃತೀಯ ಪುತ್ರಿ ಮಂಜುಳಾಳ ವಿವಾಹವು ದಿನಾಂಕ 17-4-2002ರಲ್ಲಿ ಕುಶಾಲನಗರ ಗೌಡ ಕಲ್ಯಾಣ ಮಂಟಪದಲ್ಲಿ ನಡೆಯಿತು

# ಸುಳ್ಯಕ್ಕೆ ಮೆಡಿಕಲ್ ಕಾಲೇಜು ಮಂಜೂರು: ಕುರುಂಜಿಯವರ ಸಾಧನೆ

ಸುಳ್ಯ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್ ವತಿಯಿಂದ ಮೆಡಿಕಲ್ ಕಾಲೇಜು ಆರಂಭಿಲು ಮಂಜೂರಾತಿ ದೊರೆತಿರುವುದಾಗಿ ತಿಳಿದುಬಂದಿದೆ.

ಇದರೊಂದಿಗೆ ಅಕಾಡೆಮಿಯ ಸ್ಥಾಪಕಾಧ್ಯಕ್ಷ ಕುರುಂಜಿ ವೆಂಕಟ್ರಮಣ ಗೌಡರ ಹಲವಾರು ವರ್ಷಗಳ ತಪಸ್ಸಿಗೆ ಪ್ರತಿಫಲ ದೊರೆತಂತಾಗಿದೆ. ಮಾತ್ರವಲ್ಲ ಸಾವಿರಾರು ವಿದ್ಯಾರ್ಥಿಗಳ ಭವಿಷ್ಯ ಬರೆಯುವ ಈ ಪ್ರತಿಷ್ಟಿತ ವಿದ್ಯಾಸಂಸ್ಥೆಯ ಆರಂಭಕ್ಕೆ ಹಾದಿ ನಿಚ್ಚಳವಾಗಿದೆ. ಜೂನ್‌ನಿಂದ ತರಗತಿಗಳು ಆರಂಭಗೊಳ್ಳಲಿವೆ ಎಂದು ತಿಳಿದು ಬಂದಿದೆ.

ಈಗಾಗಲೇ 300 ಬೆಡ್‌ನ ಆಸ್ಪತ್ರೆ ಮತ್ತು ಅಗತ್ಯವಿರುವೆಲ್ಲಾ ಇನ್‌ಫ್ರಾಸ್ಟ್ರಕ್ಚರ್ ಹೊಂದಿರುವ ಕುರುಂಜಿಭಾಗ್‌ನಲ್ಲಿ ಮೆಡಿಕಲ್ ಕಾಲೇಜ್‌ನ ತರಗತಿಗಳು ಜೂನ್‌ನಲ್ಲಿ ಆರಂಭಗೊಲ್ಳಲಿವೆ.



1985 ರಲ್ಲಿ ಮೆಡಿಕಲ್ ಕಾಲೇಜು ಸ್ಥಾಪನೆಯ ದೂರಗಾಮಿ ಯೋಚನೆಯೊಂದಿಗೆ ಪ್ರಯತ್ನಗಳ ಕಾಯಕ ಆರಂಬಿಸಿದ ಕುರುಂಜಿ ವೆಂಕಟ್ರಮಣ ಗೌಡರು ಆಗಲೇ ಮೆಡಿಕಲ್ ಕಾಲೇಜಿಗಾಗಿ ಯುನಿವರ್ಸಿಟಿ ಅಫಿಲಿಯೇಶನ್ ಮಂಡಿಸಿದ್ದರು. ಸರಕಾರಗಳ ನೀತಿಯಿಂದಾಗಿ ಕುರುಂಜಿಯವರ ಕನಸು ಇದುವರೆಗೆ ಈಡೇರದೆ ನಿಧಾನ ಗತಿಯಲ್ಲಿತ್ತು. ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ದೇವೇಗೌಡರು ಪ್ರಧಾನಿಯಾಗಿ ತೆರಳುವ ಸಂದರ್ಭದಲ್ಲಿ ಸುಳ್ಯಕ್ಕೆ ಮೆಡಿಕಲ್ ಕಾಲೇಜು ನೀಡಲು ಶಿಫಾರಸು ಮಾಡುವಂತೆ ನೀಡಿದ ಸೂಚನೆಯಂತೆ ಜೆ. ಎಂ. ಪಾಟೀಲ್ ಸರಕಾರ ಶಿಫಾರಸು ಮಾಡಿತು. ಆ ಸಂದರ್ಭದಲ್ಲಿ ಈ ಕಾಲೇಜಿನ ಪ್ರಕ್ರಿಯೆಗೆ ಮತ್ತಷ್ಟು ಚಾಲನೆ ಒದಗಿ ಬಂತು

ರಾಜ್ಯ ಸರಕಾರದ ಶಿಫಾರಸ್ಸಿನ ನಂತರ ಇಂಡಿಯನ್ ಮೆಡಿಕಲ್ ಕೌನ್ಸಿಲ್‌ನ ಶಿಫಾರಸು ಅಗತ್ಯವಿತ್ತು.

ಮೆಡಿಕಲ್ ಕಾಲೇಜು ಸ್ಥಾಪನೆಗೆ ಮುಂದಾಗುವ ಸಂಸ್ಥೆ 27 ಎಕ್ರೆ ಜಾಗ ಹೊಂದಿ 7 ಕೋಟಿ ರೂ ಡಿಪಾಸಿಟ್ ಇರಿಸಬೇಕಾಗಿತ್ತು. 300ಬೆಡ್‌ನ ಆಸ್ಪತ್ರೆ ಹೊಂದಿರಬೇಕಾಗಿತ್ತು. ಅದನ್ನು ಪರಿಶೀಲಿಸಲು ದೆಹಲಿಯಿಂದ ಬರುವ ಸಮಿತಿಗೆ ಸಮಾಧಾನವಾಗಿ ಅದು ಎ. ಎಂ. ಎ. ಗೆ ಶಿಫಾರಸು ಮಾಡಿದರೆ ಐ. ಎಂ. ಸಿ. ಕೇಂದ್ರ ಸರಕಾರಕ್ಕೆ ಶಿಫಾರಸು ಮಾಡುತ್ತಿತ್ತು. ಕುರುಂಜಿಯವರು ಈ ಎಲ್ಲಾ ಅಗತ್ಯತೆಗಳನ್ನು ಪೂರ್ತಿ ಸಿದ್ದಗೊಳಿಸಿದ್ದರು.

ಅಕಾಡೆಮಿಯ ಪ್ರಧಾನ ಕಾರ್ಯದರ್ಶಿ ಹಾಗೂ ಕುರುಂಜಿಯವರ ಕಿರಿಯ ಪುತ್ರ ಡಾ. ಕೆ. ವಿ. ರೇಣುಕಾಪ್ರಸಾದ್‌ರವರು ತಮ್ಮ ಎಲ್ಲಾ ದಾಖಲೆಗಳೊಂದಿಗೆ ದೆಹಲಿ ಮತ್ತು ಬೆಂಗಳೂರಿನಲ್ಲಿ ಪ್ರಯತ್ನ ಮುಂದುವರಿಸುತ್ತಲೇ ಇದ್ದರು. ಕೇಂದ್ರ ಸಚಿವ ವಿ. ಧನಂಜಯ ಕುಮಾರ್‌ರವರು ಕುರುಂಜಿಯವರ ಬೆಂಬಲಕ್ಕೆ ನಿಂತು ಮಂಜೂರಿಗೆ ಪ್ರಯತ್ನ ನಡೆಸುತ್ತಲೇ ಇದ್ದರು. ಈ ಮಧ್ಯೆ ದೆಹಲಿಯಿಂದ ಬಂದ ಐ. ಎಂ. ಸಿ. ತಂಡ ಪೂರಕವಾಗಿ ವರದಿ ಮಾಡಿತು. ಫಲವಾಗಿ ಸುಳ್ಯ ಮೆಡಿಕಲ್ ಕಾಲೇಜಿಗೆ ಮಂಜೂರಾತಿ ದೊರೆಯಿತು.

### 'ಎಲ್ಲವೂ ಚೆನ್ನಕೇಶವನ ದಯೆ'

ಚೆನ್ನಕೇಶವನ ಕೆಲಸಕ್ಕೆ ಚಾಲನೆ ದೊರೆತಂದೇ ಸುಳ್ಯಕ್ಕೆ ಮೆಡಿಕಲ್ ಕಾಲೇಜಿಗೆ ಮಂಜೂರಾತಿ ದೊರೆತಿದೆ. ಸುಳ್ಯದ ಜನತೆಗೆ ವಿಶೇಷ ಗೌರವ ದೊರೆತಂದಾಗಿದೆ. ನನ್ನ ಹದಿನೇಳು ವರ್ಷಗಳ ಕನಸು ನನಸಾಗುತ್ತಿದೆ. ನಾನು ಬಹಳಷ್ಟು ಸಂತೋಷಪಡುತ್ತಿದ್ದೇನೆ ಎಂದು ಪ್ರತಿಕ್ರಿಯಿಸಿದ್ದಾರೆ ಸುಳ್ಯದ ಅಮರ ಶಿಲ್ಪಿ ಕುರುಂಜಿ ವೆಂಕಟ್ರಮಣ ಗೌಡರು.

ವಿದ್ಯಾಭ್ಯಾಸ ಶ್ರೇಷ್ಠವಾದದು. ಇದೀಗ 3 ಜಿಲ್ಲೆಯ ಕೇಂದ್ರಸ್ಥಳವಾದ ಸುಳ್ಯದಲ್ಲಿ ಎಲ್ಲಾ ವಿದ್ಯಾಭ್ಯಾಸವೂ ದೊರೆಯುವಂತಾಗಿದೆ. ದೇಶದಲ್ಲಿ ಎಲ್ಲಿಯೂ ಈ ವ್ಯವಸ್ಥೆ ಕಾಣಲು ಸಾಧ್ಯವಿಲ್ಲ. ದೇವಸ್ಥಾನದ ಜೀರ್ಣೋದ್ಧಾರ ಹಾಗೂ ಮೆಡಿಕಲ್ ಕಾಲೇಜು ಆದಾಗ ಸುಳ್ಯ ಸರ್ವಾಂಗೀಣ ಅಭಿವೃದ್ಧಿಯಾಗುತ್ತದೆ. ಎಲ್ಲವೂ ದೇವರ ಅನುಗ್ರಹವೆನ್ನುತ್ತಾರೆ ಕುರುಂಜಿಯವರು.

---

### *ಕುರುಂಜಿಯವರ ಸಾಧನೆ ಶ್ಲಾಘನೀಯ*

ಸುಳ್ಯದಂತಹ ಗ್ರಾಮೀಣ ಪ್ರದೇಶಕ್ಕೆ ಮೆಡಿಕಲ್ ಕಾಲೇಜು ಮಂಜೂರಾಗಿರುವುದು ಸುಳ್ಯದ ಜನತೆಗೆ ಹೆಮ್ಮೆಯ ವಿಷಯ. ಕೃಷಿ ಮೂಲದ ಶ್ರೀ ಕುರುಂಜಿಯವರ ಸಾಧನೆ ನಿಜವಾಗಿಯೂ ಶ್ಲಾಘನೀಯ. ಸುಳ್ಯದಲ್ಲಿ ಶೈಕ್ಷಣಿಕ ಕ್ರಾಂತಿಯ ರೂವಾರಿ ಕುರುಂಜಿಯವರಿಗೆ ಶುಭಾಶಯಗಳು

- ಕರುಣಾಕರ ಬರೆಮೇಲು ಉದ್ಯಮಿ, ಮಂಗಳೂರು

---

### ನನಸಾದ ಕಾಲು ಶತಮಾನದ ಕನಸು:

1976 ರಲ್ಲಿ ಎನ್ನೆಂಸಿ ಆರಂಭವಾದಾಗ ಬೀಜರೂಪದಲ್ಲಿದ್ದ ಮೆಡಿಕಲ್ ಕಾಲೇಜು ಕನಸು ಇದೀಗ ನನಸಾಗಿದೆ. ಹತ್ತು ವರ್ಷಗಳ ಹಿಂದೆಯೇ ಸುಳ್ಯಕ್ಕಿದು ದಕ್ಕುತ್ತಿದ್ದರೆ ತಾಲೂಕಿನ ಬೆಳವಣಿಗೆಗೆ ಬೇರೆಯೇ ಆಯಾಮ ದೊರೆಯುತ್ತಿತ್ತು.

ಮೆಡಿಕಲ್ ಕಾಲೇಜಿನ ಶುಭಾರಂಭವು ಕಣ್ಣಿನ ದಾನಿಗಳಿಗೆ, ರಕ್ತದಾನಿಗಳಿಗೆ ಸುವರ್ಣಾವಕಾಸವನ್ನು ಕಲ್ಪಿಸಿಕೊಟ್ಟಿದೆ. ನಾನಂತೂ ನನ್ನ ದೇಹವನ್ನು ಕೆ. ವಿ. ಜಿ. ಮೆಡಿಕಲ್ ಕಾಲೇಜಿಗೆ ಮೆಡಿಕಲ್ ಉದ್ದೇಶಕ್ಕಾಗಿ ದಾನ ಮಾಡಲು (ಮರಣಾನಂತರ) ಸಂಕಲ್ಪಿಸಿದ್ದೇನೆ.

- ಡಾ. ಪ್ರಭಾಕರ ಶಿಶಿಲ

---

ಹತ್ತು ಕುಟುಂಬ 18 ಗೋತ್ರದ ಜನಾಂಗದವರ ಬಗ್ಗೆ ಸಂಶೋಧನೆ ಆಗಲೇ ಬೇಕು

# ಕೊಡಗು ಗೌಡ ಮಹಿಳಾ ಒಕ್ಕೂಟದ 4ನೇ ವಾರ್ಷಿಕ ಮಹಾಸಭೆ ಹಾಗೂ ವಾರ್ಷಿಕೋತ್ಸವ



ಕೊಡಗು ಗೌಡ ಮಹಿಳಾ ಒಕ್ಕೂಟವು ತಾರೀಖು 12-5-2002 ರಲ್ಲಿ ತನ್ನ ನಾಲ್ಕನೇ ವಾರ್ಷಿಕ ಮಹಾಸಭೆಯನ್ನು ನಡೆಸಿತು. ಬೆಳಿಗ್ಗೆ 10-30 ಕ್ಕೆ ಆರಂಭವಾದ ಈ ಮಹಾಸಭೆಯ ಅಧ್ಯಕ್ಷತೆಯನ್ನು ಹಾಲಿ ಅಧ್ಯಕ್ಷೆಯಾದ ಚಿಯಂಡಿರ ರಾಧ ಯಾದವರವರು ವಹಿಸಿದ್ದರು. ಕಡ್ಲೇರ ಶಾಂತಿಯವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಸಭೆಯು, ನೆರೆದ ಸರ್ವರನ್ನು ಪೊನ್ನಚನ ಲಲಿತ ಸೋಮಣ್ಣನವರು ಸ್ವಾಗತಿಸಿದರು. ವಾರ್ಷಿಕ ವರದಿಯನ್ನು ಕೂಡಕಂಡಿರ ಕಾವೇರಮ್ಮ ಸೋಮಣ್ಣನವರು ವಾಚಿಸಿದರು. ಕಾಲಕಂಡ ಸದಸ್ಯರಿಗೆ ಮೊದಲಿಗೆ 2 ನಿಮಿಷಗಳ ಸಂತಾಪ ಸೂಚನೆಯನ್ನು ಆಚರಿಸಿ, ಸಭೆಯು ಹಲವಾರು ವಿಷಯಗಳ ಬಗ್ಗೆ ಚರ್ಚೆ ನಡೆಸಿ, ಸರ್ವರ ಅಭಿಪ್ರಾಯದ ಮೇಲೆ ಈಗಿರುವ ಹಾಲಿ ಕಾರ್ಯಕಾರಿ ಮಂಡಳಿಯವರೆ ಮುಂದುವರಿಯುವಂತೆ ಒಕ್ಕೊರಲಿನಿಂದ ಸಮ್ಮತಿಸಿತು. ಸುಮಾರು 1500 ಕ್ಕಿಂತಲೂ ಹೆಚ್ಚು ಸದಸ್ಯರನ್ನು ಈ ಮಹಿಳಾ ಒಕ್ಕೂಟ ಹೊಂದಿದೆ. ನಿರ್ಪಾಡಿ ನಾಗವೇಣಿಯವರ ವಂದನಾರ್ಪಣೆಯೊಂದಿಗೆ ಸಭೆಯು 11-30 ಕ್ಕೆ ಮುಕ್ತಾಯವಾಯಿತು. ಅಮೆ ದಮಯಂತಿಯವರು ಕಾರ್ಯಕ್ರಮ ನಿರೂಪಿಸಿದ್ದರು.

ನಂತರ ಜಪ್ಪೆಕೋಡಿ ಗುಣಬೋಜಪ್ಪನವರ ಪ್ರಾರ್ಥನೆಯೊಂದಿಗೆ ವಾರ್ಷಿಕೋತ್ಸವವು 11-40 ರಿಂದ ಪ್ರಾರಂಭವಾಯಿತು. ಮಹಿಳಾ ಒಕ್ಕೂಟದ ವಾರ್ಷಿಕೋತ್ಸವದ ಸಮಾರಂಭವನ್ನು ಮಡಿಕೇರಿ ನಗರ ಪುರಸಭಾಧ್ಯಕ್ಷೆ ಹಾಗೂ ಮಹಿಳಾ ಒಕ್ಕೂಟದ ಪ್ರಧಾನ ಕಾರ್ಯದರ್ಶಿಯಾದ ಕೂಡಕಂಡಿರ ಕಾವೇರಮ್ಮ ಸೋಮಣ್ಣನವರು ಜ್ಯೋತಿಬೆಳಗುವುದರೊಂದಿಗೆ ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಹಾಕತ್ತೂರಿನ ಶ್ರೀಮತಿ ಸರಾಕುಟೇಲು ತುಳಸಿ ರಾಮಕೃಷ್ಣನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮಾಜಿ ಜಿಲ್ಲಾ ಪಂಚಾಯ್ತಿ ಅಧ್ಯಕ್ಷೆ ಕೆ. ಪಿ. ಚಂದ್ರಕಲಾನವರು ಹಾಗೂ ಪುತ್ತೂರಿನ ಸಮಾಜ ಸೇವಕಿ, ಲಯನ್ಸ್ ಡಾಟಿ ಸದಾನಂದಗೌಡರು, ಆಗಮಿಸಿದ್ದರು.

ಕೂಡಕಂಡಿ ಕಾವೇರಮ್ಮನವರು ಮಾತನಾಡುತ್ತಾ ತಾನು ಬೆಟ್ಟಗೇರಿ ಶಾಲೆಯಲ್ಲಿ ಚಿಕ್ಕ ಕ್ಲಾಸಿನಲ್ಲಿ ಓದುತ್ತಿದ್ದಾಗ ಗಾಂಧಿ ಸ್ಕ್ವಾಡ್‌ನ (ಸೋಮವಾರ) ನಾಯಕಿಯಾಗಿದ್ದೆ. ನಂತರ ಅದೇ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದ್ದು ಇಂದು ಈ ಮಟ್ಟಕ್ಕೆ ಬರಲು ಅದು ಪ್ರೇರಣೆಯಾಗಿದ್ದರೆ, ಮಾಜಿ ಸಚಿವರುಗಳಾದ ದಂಬೆಕೋಡಿ ಚಿಣ್ಣಪ್ಪ ಹಾಗೂ ಮುಂಡಂಡ ನಾಣಯ್ಯನವರುಗಳೇ ಕಾರಣಕರ್ತರು. ನಮ್ಮದು ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುವ ನಾವೆಲ್ಲ ಮಹಿಳೆಯರು ಒಟ್ಟಾಗಿ ಸಂಘಟಿತರಾಗಿ ಲಕ್ಷ್ಮೀಬಾಯಿ, ಇಂದಿರಾಗಾಂಧಿ, ರಮಾಬಾಯಿಯರಂತೆ ಆಗಲು ಸಾಧ್ಯವಿಲ್ಲದಿದ್ದರು, ನಮ್ಮ ಕೈಲಾದ ಸಮಾಜ ಕಾರ್ಯ ಮಾಡಬೇಕೆಂದು ತಿಳಿಸಿದರು. ಹಾಗೆಯೇ ನನ್ನ ಅಧಿಕಾರ ಅವಧಿಯೊಳಗೆ ಮಹಿಳಾ ಒಕ್ಕೂಟಕ್ಕೆ ಬಿಲ್ಡಿಂಗ್ ಕಟ್ಟಲು ನಿವೇಶನಕ್ಕೆ ಪ್ರಯತ್ನಿಸುವ ಭರವಸೆಯನ್ನು ನೀಡಿದುದಲ್ಲದೆ ಹೆಂಗಸರು, ಗೇಂಟಿಸೀರೆ ಉಟ್ಟು ಬರುವುದಾದರೆ ಗಂಡಸರು ಯಾಕೆ ಡ್ರೆಸ್ ಹಾಕಿ ಬರುವುದಿಲ್ಲ ಎಂದು ಸವಾಲೆಸೆದರು.

ಇನ್ನೊಬ್ಬ ಮುಖ್ಯ ಅತಿಥಿಯಾದ ಮಾಜಿ ಜಿಲ್ಲಾ ಪಂಚಾಯ್ತಿ ಅಧ್ಯಕ್ಷೆಯಾದ ಕೆ. ಪಿ. ಚಂದ್ರಕಲಾರವರು ಮಾತನಾಡುತ್ತಾ ಗೌಡ ಮಹಿಳೆಯರ ಆಗಮನ ಪಂಚಾಯತ್ ರಾಜ್ಯ ಎಂದ ಮೇಲೆ ಮಹಿಳೆಯ ಹೃದಯ ಬಾಗಿಲು ಪುರುಷರಿಗಿಂತ ಹೆಚ್ಚಿಗೆದೆ. ಹಲವಾರು ಸಂಘ ಸಂಸ್ಥೆಗಳಲ್ಲಿ ಮಹಿಳೆಯು ಅಧ್ಯಕ್ಷೆಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕೊಡಗು ಪ್ರತ್ಯೇಕ ಆಗಬಾರದೆನ್ನುವ ನಿರ್ಣಯ ತೆಗೆದು ಸರ್ಕಾರಕ್ಕೆ ರವಾನಿಸಿದ್ದೆ ನನ್ನ ಅಧಿಕಾರ ಕಳೆದುಕೊಳ್ಳಲು ಕಾರಣವಾಯ್ತು. ಕೇವಲ ಮೂರು ಸಾವಿರ ಜನಸಂಖ್ಯೆ ಇರುವ ಜನಾಂಗದ ನಾಯಕ,ಅತಿ ದೊಡ್ಡ ಜನಸಂಖ್ಯೆಯಲ್ಲಿರುವ ನಮ್ಮ ಸೋಮವಾರಪೇಟೆ ಜನರಿಂದ ನನ್ನನ್ನ ಗೆಲ್ಲಿಸಲಾಗದಿರುವುದಕ್ಕೆ ವ್ಯಥೆ ಪಟ್ಟದಲ್ಲದೆ, ಕೊಡಗಿನ ಪ್ರಬಲ ಕೋಮಿನ ಜನರ ಹೊಡ್ತ ಬಿದ್ದದ್ದು ಸಾಲದೆಂದು ತನ್ನ ಮನದಾಳದ ದುಃಖವನ್ನು ತಿಳಿಸಿದರು. ಮುಖ್ಯಮಂತ್ರಿಯವರಿಗೆ ಯಾವುದೇ ವಿಚಾರದಲ್ಲಿ ಒತ್ತಡವನ್ನು ತರುವಲ್ಲಿ ನಮ್ಮವರು ಏನು ಮಾಡುತ್ತಿಲ್ಲ. ಬೇರೆಯವರು ಆಗಿಂದಾಗ್ಗೆ ಚಿಕ್ಕ ಪುಟ್ಟ ವಿಚಾರಕ್ಕೆಲ್ಲಾ ಒತ್ತಡ ತರುತ್ತಾರೆ. ಸಮಯ ಸಂದರ್ಭ ಬಂದಾಗ ನಾವು ನಮ್ಮವರರೆನ್ನುವ ಅಭಿಮಾನದಿಂದ ಕುಲಬಾಂಧವರನ್ನು ಮನಸ್ಸಿನಲ್ಲಿಟ್ಟು, ಸಹಕಾರ ಸಹಾಯ ನೀಡಬೇಕಲ್ಲದೆ ಅದರ ಫಲವನ್ನು ಪಡೆದುಕೊಳ್ಳುವಂತೆ ಕಿವಿಮಾತು ಹೇಳಿದರು. ನಮ್ಮವರಲ್ಲಿ ಡೈವೋರ್ಸ್‌ಗಳು ಜಾಸ್ತಿ ಆಗ್ತಾ ಇದೆ. ಕಾರಣ ಅಂತರಂಗದ ವ್ಯತ್ಯಾಸ ಅರಿವು ಕಮ್ಮಿಯಲ್ಲದೆ, ಕೊಡವರಲ್ಲಿ ಡೈವೋರ್ಸ್ ಬಹಳ ಕಮ್ಮಿಯಲ್ಲಿದೆ ಇದು ನಿಜಕ್ಕೂ ಶ್ಲಾಘನೀಯವೆಂದರು. ಅದರಲ್ಲೂ ಒಕ್ಕಲಿಗ ಗೌಡರಲ್ಲಿ ಜಾಸ್ತಿಯೆಂದರು. ನಮ್ಮ ಭಾಷೆಯು ನಾಲ್ಕು ಗೋಡೆ ಒಳಗೆ ಚೆನ್ನಾಗಿ ಬೆಳಿಬೇಕು. ಶಾಲೆಗೆ ಹೋದಾಗ ಕನ್ನಡ, ಇಂಗ್ಲೀಷ್ ಇದ್ದೆ ಇರುತ್ತದೆ ಎಂದರು.

ಮತ್ತೊಬ್ಬ ಅತಿಥಿ ಪುತ್ತೂರು ಶಾಸಕ, ವಿರೋಧ ಪಕ್ಷದ ನಾಯಕ, ಡಿ. ಸದಾನಂದಗೌಡರ ಪತ್ನಿ, ಪುತ್ತೂರಿನ ಸಮಾಜ ಸೇವಕಿ, ಲಯನೆಸ್ಸ್ ಡಾಟಿ ಸದಾನಂದರು ವಿಶೇಷವಾಗಿ ಮಹಿಳೆಯರು ಸಮರ್ಥರಾಗಲು ವಿದ್ಯೆಬೇಕು. ವಿದ್ಯೆ ಮಾತ್ರ ಸಂಘಟನೆಗೆ ದಾರಿ ತೋರ್ರುತ್ತೆ. ವಿವಿಧ ಸಂಸ್ಥೆಯಲ್ಲಿ ಸೇವೆ

ಸಲ್ಲಿಸಿದ ಹಿರಿಯರನ್ನು ನೆನಪಿಸಿಕೊಳ್ಳುವುದು ತೀರ ಅವಶ್ಯಕ. ನಮ್ಮ ಸಂಸ್ಕೃತಿಯನ್ನು ಉಳ್ಸಿ ಬೆಳ್ಸಿ ಮುಂದಿನ ಯುವ ಪೀಳಿಗೆಗೆ ರವಾನಿಸುವ, ಮತ್ತು ಸಂಪ್ರದಾಯದ ವಿಶ್ಲೇಷಣೆಯನ್ನು ಚಿಂತಿಸ ಬೇಕಾಗಿದೆಯೆಂದರು. ಸಮಾರಂಭದಲ್ಲಿ ಸಭಿಕರ ಪರವಾಗಿ ಪರ್ಲಕೋಟಿ ಸುಬ್ಬಮ್ಮ, ಯಾಲದಾಳು ಡಾ|| ಮನೋಜ್ ಬೋಪಯ್ಯ, ಪಟ್ಟಡ ಪ್ರಭಾಕರನವರು ಮಾತನಾಡಿದರು. ಕೂಡಕಂಡಿ ಕಾವೇರಮ್ಮನವರನ್ನು ಪುರಸಭೆಗೆ ಆಯ್ಕೆ ಆದ ಮತ್ತು ಮಹಿಳಾ ಸಂಘಟನೆ ಹಾಗೂ ಹತ್ತು ಹಲವು ಸಂಸ್ಥೆಗಳಲ್ಲಿ ದುಡಿಯುತ್ತಿರುವುದಕ್ಕಾಗಿಯೂ ಮತ್ತು ಬೈತಡ್ಕ ಜಾನಕಿಯವರನ್ನು ಮಹಿಳಾ ಸಂಘಟನೆ ಮತ್ತು ಅರೆಗನ್ನಡ ಭಾಷೆಯಲ್ಲಿ ಮಡಿಕೇರಿ ಆಕಾಶವಾಣಿ ಕೇಂದ್ರದಿಂದ ಹೆಚ್ಚು ಪ್ರಸಾರದ ಕಾಯಕ್ರಮ ನೀಡಿದಕ್ಕೂ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡ ಪ್ರಯುಕ್ತವಾಗಿಯು ಫಲಪುಷ್ಪ ತಾಂಬೂಲ ಶಾಲು ಹೊದಿಸಿ ಸನ್ಮಾನಿಸಲಾಯಿತು.

ಒಕ್ಕೂಟಕ್ಕೆ ಸಹಕಾರ ನೀಡಿದ ಈ ಕೆಳಗಿನ ಮಹಿಳಾ ಸದಸ್ಯರನ್ನು ಹಾರಹಾಕಿ ಪ್ರಶಂಸಿಸಲಾಯಿತು. ಇವರುಗಳೆಂದರೆ ಬಾರಿಕೆ ಮೀನಾಕ್ಷಿ ಪೂಣಚ್ಚ, ಮಂಡೀರ ಬೀನಾ ದೇವಯ್ಯ, ಕೂಡಕಂಡಿ ಸುಧಾ ನಾಣಯ್ಯ, ಬೈತಡ್ಕ ದೇವಮ್ಮ, ಪಡಿಕಲ್ ಸೀತಮ್ಮ, ಪೇರಿಯನ ರಾಣಿ ರತ್ನಾಕರ್, ಕಾಳೇರಮ್ಮನ ಲತಾ, ಮಂಞ್ಞಾಂಡ್ರ ರೇಖಾ ಉಲ್ಲಾಸ, ಕೂರನ ತಾರಮಣಿ, ಸೂದನ ಮೋಹಿನಿ, ದಾಯನ ಪಾರ್ವತಿ ಅಪ್ಪಣ್ಣ, ಕುಲ್ಲಚನ ಜ್ಯೋತಿ ಕಾರ್ಯಪ್ಪ, ಕೋಳುಮುಡಿಯನ ಪ್ರೇಮಾ ಅನಂತ,ಇಂದಿರಾ ದೇವಿ ಪ್ರಸಾದ್, ಕಾಳಿಕಾಂಬ ಯುವತಿ ಮಂಡಳಿಯ ಅಧ್ಯಕ್ಷರು ಇವರೆಲ್ಲರೂ ಒಕ್ಕೂಟಕ್ಕೆ ಹೆಚ್ಚಿನ ಸಹಕಾರ ನೀಡಿದ್ದಕ್ಕೆ ಹಾರ ಹಾಕಿ ಸನ್ಮಾನ ಅಭಿನಂದನೆ ನೀಡಿ ಪ್ರಶಂಸಿಸಲಾಯಿತು. ನಂತರ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ ಶ್ರೀಮತಿ ಸರಾಕುಟೇಲು ತುಳಸಿ ರಾಮಕೃಷ್ಣನವರು ಮಾತನಾಡುತ್ತಾ ಮಹಿಳೆಯರು ತಮ್ಮ ಆರ್ಥಿಕ ಸ್ಥಿತಿ ಉತ್ತಮಗೊಳ್ಳಲು ತಮಗೆ ಸಾಧ್ಯವಿರುವ ಕೋಳಿ ಸಾಕಣೆ, ನಾಯಿ ಸಾಕಣೆ, ಜೇನು ಸಾಕಣೆ, ಹಂದಿ ಸಾಕಣೆ, ತೋಟದ ಕಾರ್ಯಕ್ರಮ ಹಮ್ಮಿಕೊಳ್ಳಬೇಕು. ಮಹಿಳೆಯರಿಗೆ ಖಂಡಿತವಾಗಿಯೂ ಕಾನೂನಿನ ಜ್ಞಾನ ಅವಶ್ಯಕತೆಯಿರುವುದಲ್ಲದೆ ಸಂಜೆ ಹೊತ್ತು ಆಟೋಟಗಳಲ್ಲಿ ಪಾಲ್ಗೊಳ್ಳುವುದು, ಸೋಭಾನೆ ಮತ್ತಿನ್ನಿತರ ಮನೋರಂಜನೆ ಕಾರ್ಯಕ್ರಮಗಳಲ್ಲಿ ಮಹಿಳೆಯರು ಹೆಚ್ಚಾಗಿ ಸಕ್ರಿಯವಾಗಿ ಪಾಲ್ಗೊಳ್ಳಬೇಕೆಂದು ಕರೆ ನೀಡಿದರು.

ಊಟದ ನಂತರ ಮಹಿಳೆಯರಿಂದ ಸಾಂಸ್ಕೃತಿಕ ಕಾರ್ಯಕ್ರಮ ತುಂಬಾ ಚೆನ್ನಾಗಿ ಮೂಡಿ ಬಂತು. ಮಹಿಳೆಯರಿಂದ ಕೋಲಾಟ, ಸುಗ್ಗಿ ಕುಣಿತ, ಸೋಬಾನೆ ಪದಗಳು, ಹಾಡುಗಳು, ಡ್ಯಾನ್ಸ್‌ಗಳು, ಹೊನ್ನಮ್ಮನ ನಾಟಕ, ಕಿರುನಾಟಕ, ರೂಪಕಗಳು ಮೂಡಿ ಬಂದವು. ಸಂಚಿ ಹೊನ್ನಮ್ಮನ ನಾಟಕವು ನೆರೆದ ಸರ್ವರ ಮನವನ್ನು ಗೆದ್ದು ಪ್ರಸಂಶೆಗೆ ಪಾತ್ರವಾಯಿತು. ಕಾರ್ಯಕ್ರಮವು ಸಂಜೆ 4-30 ಕ್ಕೆ ಮುಗಿಯಿತು. ಮಂಞ್ಞಾಂಡ ರೇಖಾ ಉಲ್ಲಾಸನವರು ಸಾಂಸ್ಕೃತಿಕ ಕಾರ್ಯಕ್ರಮ ನಿರೂಪಿಸಿದರೆ, ಶ್ರೀಮತಿ ಪಂಜಿಪಳ್ಳ ಇಂದ್ರಾಕ್ಷಿಯವರು ವಂದಿಸಿದರು.

- ಸಂಗಾತಿ

# ಬಾಳೆಡಿ ಕ್ರಿಕೆಟ್ ತಂಡಕ್ಕೆ ಪರ್ಲಕೋಟಿ ಕಪ್

ಕೊಡಗು ಗೌಡ ಮತ್ತುಸಾಂಸ್ಕೃತಿಕ ಅಕಾಡೆಮಿ ಮತ್ತು ಪರ್ಲಕೋಟಿ ಕುಟುಂಬಸ್ಥರ ಸಂಯುಕ್ತಾಶ್ರಯದಲ್ಲಿ ನಗರದ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪರ್ಲಕೋಟಿ ಕಪ್ ೨೦೦೨ ಕ್ರಿಕೆಟ್ ಪ್ರಶಸ್ತಿಯನ್ನು ಈ ಬಾರಿ ಬಾಳೆಡಿ ಕುಟುಂಬಸ್ಥರ ತಂಡ ಪಡೆದುಕೊಂಡಿತು.

ಕಳೆದ ತಿಂಗಳಲ್ಲಿ ನಡೆದ ಪಂದ್ಯಾವಳಿಯ ಅಂತಿನ ಪಂದ್ಯ ದಿನಾಂಕ 26-5-02ರಲ್ಲಿ ನಡೆದು. ಬಾಳೆಡಿ ಕುಟುಂಬಸ್ಥರ ತಂಡವು ಸೆಟ್ಟೇಜನ ತಂಡವನ್ನು ಮೂರು ವಿಕೆಟ್‌ಗಳಿಂದ ಪರಾಭವಗೊಳಿಸಿ ಪರ್ಲಕೋಟಿ ಕಪ್ ಅನ್ನು ತನ್ನದಾಗಿರಿಸಿಕೊಂಡಿತು.

ಟಾಸ್‌ಗೆದ್ದು ಮೊದಲು ಬ್ಯಾಟಿಂಗ್ ಆಯ್ದುಕೊಂಡ ಸೆಟ್ಟೇಜನ ತಂಡವು ನಿರ್ಧಾರಿತ ೧೨ ಓವರ್‌ಗಳಲ್ಲಿ ೭ ವಿಕೆಟ್ ಕಳೆದುಕೊಂಡು ೫೬ ರನ್ ಮಾಡಿತು. ಈ ಮೊತ್ತವನ್ನು ಬೆನ್ನಟ್ಟಿದ ಬಾಳೆಡಿ ತಂಡ ಇನ್ನೂ ಒಂದು ಬಾಲ್ ಇರಬೇಕಾದರೆ ೭ ವಿಕೆಟ್ ಕಳೆದುಕೊಂಡು ಜಯದ ಗುರಿ ತಲುಪಿತು. ವಿಜಯದ ರನ್ ಅನ್ನು ಬೌಂಡರಿ ಬಾರಿಸುವುದರ ಮೂಲಕ ತಂದುಕೊಟ್ಟರು.

ಇದಕ್ಕೂ ಮೊದಲು ನಡೆದ ಸೆಮಿಫೈನಲ್ ಪಂದ್ಯಗಳಲ್ಲಿ ಸೆಟ್ಟೇಜನ ತಂಡ ಊರುಬೈಲು ತಂಡವನ್ನು ಮತ್ತು ಬಾಳೆಡಿ ತಂಡ ಪರ್ಲಕೋಟಿ ತಂಡವನ್ನು ಪರಾಭವಗೊಳಿಸಿ ಫೈನಲ್ ಪ್ರವೇಸಿಸಿದ್ದವು. ಪಂದ್ಯಾವಳಿಯ ಅತ್ಯುತ್ತಮ ಬೌಲರ್ ಪ್ರಶಸ್ತಿಯನ್ನು ಬಾಳೆಡಿ ರವಿ, ಸರಣಿ ಪುರುಷೋತ್ತಮರಾಗಿ ಸೆಟ್ಟೇಜನ ಪವನ್, ಉತ್ತಮ ಬ್ಯಾಟ್ಸ್‌ಮನ್ ಪ್ರಶಸ್ತಿಯನ್ನು ಊರುಬೈಲು ಹರೀಶ ಪಡೆದುಕೊಂಡರು. ನಂತರ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪರ್ಲಕೋಟಿ ಕುಟುಂಬದ ಪಟ್ಟೇದಾರ ತಮ್ಮಯ್ಯ ಅವರು ವಹಿಸಿ ವಿಜೇತ ತಂಡಗಳಿಗೆ ಬಹುಮಾನ ವಿತರಿಸಿದರು.

ವೇದಿಕೆಯಲ್ಲಿ ಪರ್ಲಕೋಟಿ ಸೋಮಯ್ಯ, ಮೋಟಯ್ಯ, ಜನಾರ್ಧನ, ಮಾಚಯ್ಯ, ಲಿಂಗಪ್ಪ, ಮೊಣ್ಣಪ್ಪ, ಕುಶಾಲಪ್ಪ, ರಾಷ್ಟ್ರೀಯ ಹಾಕಿ ಆಟಗಾರ ಗೋವಿಂದ ಅವರು ಉಪಸ್ಥಿತರಿದ್ದರು.

೨೦೦೩ ನೇ ಸಾಲಿನ ಕ್ರಿಕೆಟ್ ಪಂದ್ಯಾವಳಿಯನ್ನು ನಡೆಸಲು ನಿರ್ಧರಿಸಿರುವ ದಂಬೆಕೋಡಿ ಕುಟುಂಬಸ್ಥರಾದ ಹಾಗೂ ಮಾಜಿ ಶಾಸಕ ದಂಬೆಕೋಡಿ ಮಾದಪ್ಪ ಮತ್ತು ಹರೀಶ ಅವರುಗಳಿಗೆ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ, ಪರ್ಲಕೋಟಿ ತಮ್ಮಯ್ಯ ಹಾಗೂ ಸೋಮಯ್ಯ ಅವರುಗಳು ವೀಳ್ಯ ನೀಡಿದರು.

ತುಂತಜೆ ಗಣೇಶ ಸ್ವಾಗತಿಸಿದರು. ಕೋಡಿ ಚಂದ್ರಶೇಖರ ನಿರೂಪಿಸಿದರೆ, ಪರ್ಲಕೋಟಿ ಕಾಂತಾ ವಂದಿಸಿದರು. ಇದೇ ಸಂದರ್ಭ ಪತ್ರಕರ್ತ ಅಂಚೆಮನೆ ಸುಧಿ ಅವರನ್ನು ಸನ್ಮಾನಿಸಲಾಯಿತು.

ಸುಮಾರು 76 ತಂಡಗಳು ಪಾಲ್ಗೊಂಡಿದ್ದವು

-ಸಂಗಾತಿ.

ಅಂದು ಕಾಮನ ಹರನು, ಕೊಂದ ನೆಂಬುದು ಹುಸಿಯು

# Kodagu Educational Academy (R) Bangalore

Proceedings of the Ist Annual General Body Meeting of KEA Bangalore Held on 21-04-2002 At Kodagu Gowda Samaja (REGD).No. 413, Cauvery Nagar, Bangalore - 560 032

The very General Body of KEA was held on 24-4-02 with a very good participation of the Promoters/Members of the KEA and deliberated the following issues:

As scheduled the meeting commenced sharp at 10-30 a.m. presided under the Chairmanship of Dr. Guddera P. Chinaiah, President of KEA, Bangalore.

After the melodious invocation by Smt Bittira S. Chondamma the Vice- President Smt Hosuru Vasanthi welcomed the Office bearers and the members in the gathering. It was a well attended participation.

The General Secretary of the Academy Shri Motana C. Ravi Kumar presented the Annual Report for the year 2001-2002. In his report he clearly brought out the genesis of the Academy and next, the formation of the Cauvery National Public School as the first and important activity in his report. He traversed the events of the inaugural function, celebration of Independence Day. The Republic Day function, Pulse Polio Programme and the free Medical Camp. He brought to the notice of the members that at the commencement of the institution virtually in June 2001 the School had eight students which slowly rose up to eleven and by the end of the Academic year the strength has swollen to thirty. He was confident that in the years to come with the commencement of the second Academic session the strength will cross fifty.

The General Secretary appreciated the whole hearted support of the community members in offering the Promotional money which alone helped to take up a hard decision to launch the project of Education under the Academy. He also made an announcement that Shri Devejana A Dhananjaya, Retd., Commandant B.S.F. will hence forth be in-charge to head the committee of the school in accordance to Karnataka Education Act. After active discussion by the members seeking clarifications the General Body proceeded with the next item.

The Audited Account by the Chartered Accountant for the year ending 31-3-2001 and 31-3-2002 was presented by Shri Kalekoti U. Machaiah,the Treasurer of the Academy. He presented the Balance sheet duly circulated and clarified the investments made to the members. The members of the General Body participated in the discussions and their enquiries. Among the members vocal in seeking clarifications were Shri Kolibailu A. Belliappa I.A.S., (Retd) President of KGS, Shri Huderi Basappa, Shri Telana Rajesh, Shri D.A. Dhananjaya and Shri K.A. Ganapathy,

The members suggested certain suggestions for necessary implementation and incorporation in the accounts, which was agreed to be followed in principle. The General body approved the statement of accounts.

The members were also made known about the names of the Promoters and the names of the Donors. The members were also appraised about the receipt of three Endowments some in part, in all each Endowment being assured for an amount of Rs.1 lakh. An Appeal was made that the Academy welcomes liberal contributions in order to achieve its objectives.

Dr. Kaverimane M. Bojappa the Advisor of the Academy spoke. In his speech, he clearly narrated the fast development of the Academy and the growth of the cauvery National Public School under the Academy. He further briefed the General Body that the primary objectives of the Academy and its clear conviction to provide quality education to the children. He traced the infrastructure facilities already provided by the Academy and called upon the community people never to look back but to go ahead with full force and to see that the school becomes one day a model one, with the sustained and moral support of the members coupled with financial support.

Shri K.A. Ganapathy, Member of the Governing Body of the Academy spoke about the need to strengthen the school. He emphasized that in spite of the growth of the Academy reflected by the performance of the school, we should not be carried away by criticism about the prospectus of the School, as it will diminish the collective zeal: Any thing to grow requires a gestaton period and to nip the worthy cause of Education at its bud in the name of criticism without participating in a way is little unjust. He emphasized that if a member can spare 5% of their time in as much as 5% of their financial gain for a social cause. He thundered that the Academy can do wonders. Therefore, in his emotional speech he emphasized the need to unite as a force.

Shri D.A. Dhananjaya Appreciated the worthy cause of the Academy and cautioned that whenever good work is done criticism bound to be there. However, we should not loose hope to move forward to achieve the objectives. He emphasized that his participation and involvement will be always available for the cause, which the Academy has taken.

Smt Mayuri Sharma, Teacher of the School also spoke laying emphasis assuring the members that the school will grow from strength to strength. She assured that she along with other teachers. including staffs will do their best in discharge of their duties in a commandable manner.

The President Dr. G.P. Chinnaiah in his concouding remarks expressed his conficence in the working of the Academy, appreciated the dedicated service and seniority of the secretary, the Committee members, advisors as well as, well-wishers. He said the discussion that transpired today was very fruitful and any criticism of healthy nature is always welcome as it encourages, to proceed in the right direction. Dr. G.P. Chinnaiah further mentioned that he strongly feels that KEA will survive and progress in its activities, provided all of us act as one. Appreciation and acknowledgment are the key ingredients to our progress and success. He wished and prayed to God to keep every one happy, united and have a broad vision. He expressed his gratitude for the Co-operation of all in the various activities of the KEA and concluded by quoting the famous quotes of Dr. D.V.G.,

"ನಗುವುದು ಸಹಜ ಧರ್ಮ, ನಗಿಸುವುದು ಪರಧರ್ಮ
ನಗುವ, ನಗಿಸುವ ನಗಿಸಿ ನಗುತ ಬಾಳುವ ಮಂಕುತಿಮ್ಮ"

Nangaru Ningaraja proposed Vote of thanks and in acknowledging the service and co-operation of every one extending the service in various activities of KEA.

Shri Nangaru Ningaraja the Governing Council Member of the Academy while proposing vote of thanks expressed his experiences and problems in establishing and running any school at its initial period. The General Body was closed by 1-30 p.m. sharp with the National Anthem.

- Mottana Ravikumar,
General Secretary, KEA

# ನಂಜಯ್ಯನ ಸಣ್ಣಯ್ಯ ದೇವಿಪ್ರಸಾದ್‌ರವರ ಷಷ್ಟ್ಯಬ್ಧ ಪೂರ್ತಿ ಸಮಾರಂಭ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರಿಂದ ಆಶೀರ್ವಚನ.



ಕಳೆದ ಏಪ್ರಿಲ್ 28 ನೇ ತಾರೀಖು ನಿಸರ್ಗ ಮಡಿಲ ಸಂಪಾಜೆ ನಾಡು ಶೃಂಗರಿಸಿಕೊಂಡು ಜನಾಗಮನವನ್ನು ಸ್ವಾಗತಿಸುತ್ತಿತ್ತು. ಮುಂದೆ ಸಾಗಿದಂತೆ ದೇವಿಪ್ರಸಾದ್‌ರವರ ಸುಂದರ ಭವನ, ಮುಂಭಾಗದಲ್ಲಿ ಬೃಹತ್ ಶಾಮಿಯಾನ ಸಹಸ್ರಾರು ಕುರ್ಚಿಗಳಲ್ಲಿ ಭರ್ತಿಯಾಗಿ ಕುಳಿತ ಜನಸಾಗರ. ವಿದ್ಯುದಾಲಂಕೃತ ಸಭಾಂಗಣ, ಹೂವಾಲಂಕೃತ ವೇದಿಕೆ, ಅಭಿಮಾನಿಗಳಿಂದ ಅಭಿಮಾನದ ಮಹಾಪೂರ, ಗಂಧದ ಹಾರಗಳಿಂದ ತುಂಬಿ ಪುಳಕಿತಗೊಂಡ ದೇವಿಪ್ರಸಾದ್ ದಂಪತಿಗಳು, ನೆರೆದ ಸಹಸ್ರಾರು ಬಂಧುಗಳಿಗೆ ಆದಿಚುಂಚನಗಿರಿ ಮಠಾಧೀಶ ಜಗದ್ಗುರುಗಳಿಂದ ಆಶೀರ್ವಚನ. ಸುಡು ಬಿಸಿಲ ಬೇಗೆಯ ನಡುವೆಯೂ ದೇವಿ ಪ್ರಸಾದರಿಗೆ ಅಭಿಮಾನದ ಸಿಂಚನ. ಇವು ಸಂಪಾಜೆಯ ಎನ್. ಎಸ್. ದೇವಿಪ್ರಸಾದರಿಗೆ 60 ವರ್ಷಗಳು ಪೂರ್ಣಗೊಂಡ ಸುಸಂದರ್ಭದಲ್ಲಿ ಅವರ ಅಭಿಮಾನಿ ಬಳಗ ಹಮ್ಮಿಕೊಂಡಿದ್ದ 'ಷಷ್ಟ್ಯಬ್ಧಪೂರ್ತಿ' ಸಮಾರಂಭದಲ್ಲಿ ಕೊಡಗು ಸಂಗಾತಿಗೆ ಕಂಡು ಬಂದ ದೃಶ್ಯಾವಳಿಗಳು.

ಕೊಡಗಿನ ಖ್ಯಾತ ಸಾಹಿತಿ, ಸಮಾಜ ಚಿಂತಕ, ಕಲಾವಿದ, ನಿರ್ದೇಶಕ, ಶಿಕ್ಷಣಪ್ರೇಮಿ, ಹೋರಾಟಗಾರ, ದಾನಿ, ಸಹಕಾರಿ ದುರೀಣ, ಹಿತಚಿಂತಕ, ರಂಗಕರ್ಮಿ , ಸಂಘಟಕ, ಉತ್ತಮ ಕೃಷಿಕ ಬುದ್ಧಿಜೀವಿ ಸ್ನೇಹಜೀವಿ ಎನಿಸಿಕೊಂಡಿರುವ ಶ್ರೀ ಎನ್. ಎಸ್. ದೇವಿಪ್ರಸಾದ್‌ರವರು 60 ಸಂವತ್ಸರಗಳನ್ನು ಯಶಸ್ವಿಯಾಗಿ ಸಮಾಜಸೇವೆಯಲ್ಲಿ ಕಳೆದು ಜನಮನ್ನಣೆಗೆ ಪಾತ್ರರಾಗಿರುವುದರಿಂದ ಅವರ ಅಭಿಮಾನ ಬಳಗ ಅವರ ನಿವಾಸದಲ್ಲಿ ಅವರಿಗೆ "ಷಷ್ಟ್ಯಬ್ಧ ಪೂರ್ತಿ' ಅಭಿನಂದನಾ ಸಮಾರಂಭವನ್ನು ಏರ್ಪಡಿಸಿತ್ತು.

ಸಮಾರಂಭದಲ್ಲಿ ದೇವಿಪ್ರಸಾದರಿಗೆ ಅಭಿನಂದನಾ ಭಾಷಣ ಮಾಡಿದ ಎನ್. ಎಮ್. ಸಿ. ಕಾಲೇಜಿನ ಪ್ರಾಧ್ಯಾಪಕ ಡಾ|| ಪ್ರಭಾಕರ ಶಿಶಿಲರವರು ಮಾತನಾಡಿ ಸುಳ್ಯದಲ್ಲಿ ವೆಂಕಟ್ರಮಣ ಗೌಡರು ಹೆಸರು ಮಾಡಿರುವಂತೆ, ಸಂಪಾಜೆಯಲ್ಲಿ ದೇವಿಪ್ರಸಾದ್‌ರವರು ಹೆಸರು ಮಾಡಿದ್ದಾರೆ. ದೇವಿಪ್ರಸಾದ್‌ರವರಲ್ಲಿ ಎಲ್ಲಾ ಒಳ್ಳೆತನಗಳೂ ಮನೆ ಮಾಡಿವೆ. ಸಾಕಷ್ಟು ಸಂಪತ್ತಿದ್ದ ಕೆಟ್ಟ ಜನ ಹಲವು ವ್ಯಸನಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಆದರೆ ದೇವಿಪ್ರಸಾದ್‌ರಂತಹ ಒಳ್ಳೆಯವರು ಕಾವ್ಯ, ಸಾಹಿತ್ಯ, ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇರುವ ಸಂಪತ್ತನ್ನು ದಾನಮಾಡುವುದು, ಶತ್ರುವನ್ನು ಕ್ಷಮಿಸುವುದು ಎಲ್ಲರನ್ನು ಪ್ರೀತಿಯಿಂದ ಕಾಣುವುದು ನೋವನ್ನೂ ನುಂಗಿ ನಗುವನ್ನು ಹಂಚುವುದು ಇವು ಶ್ರೇಷ್ಠ ವ್ಯಕ್ತಿಗಳಲ್ಲಿರುವ ಶ್ರೇಷ್ಠ ಗುಣ, ಈ ಗುಣಗಳನ್ನೆ ಮೈಗೂಡಿಸಿಕೊಂಡಿರುವ 'ದೇವಿಪ್ರಸಾದ್‌ರವರು ನಿಜಕ್ಕೂ ಶ್ರೇಷ್ಠ ವ್ಯಕ್ತಿ ಎಂದು ಕೊಂಡಾಡಿದರು.

ಸಮಾರಂಭಕ್ಕೆ ಕುಂಭಕಳಶ, ವಾದ್ಯಗೋಷ್ಠಿಯ ಸ್ವಾಗತದೊಡನೆ ಆಗಮಿಸಿದ ಆದಿಚುಂಚನಗಿರಿ ಮಠಾಧೀಶರಾದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರು ನೆರೆದ ಸಹಸ್ರಾರು ಜನರಿಗೆ ಆಶೀರ್ವಚನ ನೀಡಿ ನಾವು ಎಷ್ಟು ಕಾಲ ಬದುಕಿದ್ದೇವೆ ಎನ್ನುವುದು ಮುಖ್ಯ., ಮನುಷ್ಯ ಜನ್ಮ ಶ್ರೇಷ್ಠವಾದುದರಿಂದ ಅದನ್ನು ನಾವು ಸದುಪಯೋಗ ಪಡಿಸಿಕೊಳ್ಳಬೇಕು. ನಮಗೆ ಸುಮಾರು 7 ಸಾವಿರ ವರ್ಷಗಳ ಇತಿಹಾಸವಿದ್ದರೂ, ಮನುಷ್ಯನನ್ನು ಅರ್ಥಮಾಡಿಕೊಳ್ಳಲು ಮನುಷ್ಯನಿಗೆ ಸಾಧ್ಯವಾಗಿಲ್ಲ. ಆದುದರಿಂದ ನಾವು ಎಷ್ಟೇ ಉನ್ನತ ಮಟ್ಟಕ್ಕೇರಿದರೂ ಸೃಷ್ಟಿಕರ್ತನ ಸಮಾನ ತಲುಪಲು ಸಾಧ್ಯವಿಲ್ಲ. ನಿರಂತರವಾಗಿ ಆತನ ಚಿಂತನೆ, ಧ್ಯಾನದಿಂದ, ಸತ್ಕಾರ್ಯಗಳಲ್ಲಿ ತೊಡಗಿದಾಗ ಜೀವನ ಸಾಕ್ಷಾತ್ಕಾರ ಸಾಧ್ಯ ಎಂದು ನುಡಿದರು.

ಅಭಿನಂದನೆಯನ್ನು ಸ್ವೀಕರಿಸಿ ಮಾತನಾಡಿದ ಎನ್. ಎಸ್. ದೇವಿಪ್ರಸಾದ್‌ರವರು 60 ವರ್ಷಗಳ ಹಿಂದೆ ನಮ್ಮ ತಂದೆಯವರು ಇದೇ ಸ್ಥಳದಲ್ಲಿ ಸಿಹಿ ಹಂಚಿದ್ದರು. ನಂತರ ನಾನೇನಾದರು ಕಹಿ ಹಂಚಿದ್ದರೆ ಅದು ಕ್ಷಮಿಸಲ್ಪಡಲಿ ಎಂದು ಆಶಿಸಿ ತಾನೆಂದು ಜನ ಹಿತಕ್ಕೆ ವಿರುದ್ಧವಾಗಿ ನಡೆದಿಲ್ಲ ಎಂದರಲ್ಲದೆ, 1837 ರಲ್ಲಿ ಬ್ರಿಟಿಷರ ಅವಗಣನೆಗೆ ಒಳಗಾದ ನಮ್ಮ ವಿಭಾಗ ಈಗಲೂ ನಿರ್ಲಕ್ಷಿಸಲ್ಪಡುತ್ತಿರುವುದು ವಿಷಾದನೀಯ ಎಂದರು. ಜೊತೆಗೆ ಈ ವಿಭಾಗದ ಅಭಿವೃದ್ಧಿಗೆ ತಾನು ಶ್ರಮಿಸುವುದಾಗಿಯೂ ಭರವಸೆ ನೀಡಿದರಲ್ಲದೆ, ಸ್ವಾಮೀಜಿಯವರ ಸಹಕಾರವನ್ನು ಕೋರಿದರು.

ಸಮಾರಂಭದಲ್ಲಿ ಎಂ. ಬಿ. ಸದಾಶಿವ, ಬಡ್ಡಡ್ಕ ವಿದ್ಯಾಧರ ಸೇರಿದಂತೆ ಹಲವರು ದೇವಿಪ್ರಸಾದ್‌ರ ಬಗ್ಗೆ ಅಭಿಮಾನದ ಮಾತುಗಳನ್ನು ಆಡಿದರು. ಇದಕ್ಕೂ ಮೊದಲು ದೇವಿಪ್ರಸಾದ್ ದಂಪತಿಗಳು ಆದಿಚುಂಚನಗಿರಿ ಸ್ವಾಮೀಜಿಯವರ ಪಾದ ಪೂಜೆಯನ್ನು ನೆರವೇರಿಸಿದರು. ದೇವಿ ಪ್ರಸಾದರ ಭಾವ ಎಂ. ಬಾಲಕೃಷ್ಣಗೌಡರವರು ಸ್ವಾಗತಿಸಿದರೆ, ಕೆ. ಎಂ. ಪುಂಡರೀಕರವರು ಪ್ರಾರ್ಥನೆ ಮಾಡಿದರು. ಎನ್. ಎಂ. ಸಿ. ಕಾಲೇಜಿನ ಪ್ರಾಂಶುಪಾಲರಾದ ಕುರುಂಜಿ ಗಂಗಾಧರ ಗೌಡರವರು ಕಾರ್ಯಕ್ರಮವನ್ನು ನಿರೂಪಿಸಿ ವಂದನಾರ್ಪಣೆಗೈದರು.

-ಸಂಗಾತಿ.

---

ಅತ್ತ ಸೂಳೆಯರ ಸಂಗ, ಇತ್ತ ವಿಧವೆಯ ಸಂಗ, ನಿತ್ತ ನೋಟ ಎತ್ತ

# ಗೌಡ ಜನಾಂಗ ಹೋರಾಟಕ್ಕೆ ಸಜ್ಜುಗೊಳ್ಳಬೇಕಿದೆ

ಸುಮಾರು ಮೂರು ವರ್ಷಗಳ ಹಿಂದಿನ ಮಾತು. ಆಗ ಕೊಡಗಿನಲ್ಲಿ ಪ್ರತ್ಯೇಕತೆಯ ಕೂಗು ಮುಗಿಲು ಮುಟ್ಟಿತ್ತು. ಅದನ್ನು ವಿರೋಧಿಸುವ ಪ್ರಜಾವೇದಿಕೆಯೂ ಜನ್ಮ ತಲೆದಿತ್ತು. ಪರ-ವಿರೋಧಗಳ ಅಲೆಯೆದ್ದು, ಕೊಡಗಿನಲ್ಲಿ ಬಿಗುವಿನ ವಾತಾವರಣ ಉಂಟಾಗಿತ್ತು. ಪತ್ರಿಕೆಗಳೂ ಆಗಿನ ವಿದ್ಯಾಮಾನಗಳನ್ನು ತಮ್ಮದೇ ವಿಶ್ಲೇಷಣೆಗಳಿಗೊಳಪಡಿಸುತ್ತಿದ್ದ ಕೊಡಗಿನ ಪ್ರಮುಖ ದಿನಪತ್ರಿಕೆ 'ಶಕ್ತಿ' ತನ್ನ ಸಂಪಾದಕೀಯದಲ್ಲಿ ಬರೆಯುತ್ತಾ 'ಗೌಡ' ಜನಾಂಗ ಕೊಡಗಿನ ಪ್ರಬಲ ಜನಾಂಗವಾಗಿದ್ದರೂ ಸಮಸ್ಯೆಗಳ ವಿರುದ್ಧದ ಹೋರಾಟದಲ್ಲಿ ಸಕ್ರಿಯತೆಯನ್ನು ಮೆರೆಯದೆ ಸೌಲಭ್ಯಗಳ ಪಾಲನ್ನುಮಾತ್ರ ಅಪೇಕ್ಷಿಸುತ್ತಿದೆ ಎನ್ನುವ ಅರ್ಥ ಬರುವಂತೆ ಬರೆಯಿತು. ಅದಾದ ಕೆಲವೇ ದಿನಗಳಲ್ಲಿ 'ಗೌಡ' ಜನಾಂಗದ ಪ್ರಮುಖರು ಮಡಿಕೇರಿಯ ಗೌಡ ಸಮಾಜದಲ್ಲಿ ಸಭೆ ಸೇರಿ ಕೊಡಗು ಪ್ರತ್ಯೇಕತೆಯ ಬಗ್ಗೆ ತಮ್ಮ ನಿಲುವನ್ನು ಸ್ಪಷ್ಟಪಡಿಸುದಲ್ಲಿದ್ದರು. ಆದರೆ ದುರಾದೃಷ್ಟವಶಾತ್ ಅದೇ ಸಭೆಯಲ್ಲೇ ಮಾಜಿ ಶಾಸಕರಾಗಿದ್ದ ಪಾಂಡನ ಸುಬ್ಬಯ್ಯನವರು ದೈವಾಧೀನರಾದರು. ತಕ್ಷಣ ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿ, ಪತ್ರಿಕೆಯಲ್ಲಿ ಸಂತಾಪ ಸೂಚನೆಯನ್ನು ಪ್ರಕಟಿಸುವುದಕ್ಕಾಗಿ 'ಗೌಡ ನೇತಾರರು 'ಶಕ್ತಿ ಪತ್ರಿಕೆಯ ಕಛೇರಿಗೆ ಧಾವಿಸಿದವರು ಮೊದಲು ಮಾಡಿದ ಕೆಲಸವೆಂದರೆ ಪ್ರತಿಯೊಬ್ಬರೂ ಸಂಪಾದಕರನ್ನು ಅಭಿನಂದಿಸಿ ಗೌಡ ಜನಾಂಗ ಯಾವುದೇ ಹೋರಾಟದಲ್ಲಿ ತೊಡಗಿಕೊಳ್ಳುತ್ತಿಲ್ಲವೆಂಬುದನ್ನು ಪರೋಕ್ಷವಾಗಿ ಒಪ್ಪಿಕೊಂಡದ್ದು.

ಗೌಡ ನೇತಾರರೆನಿಸಿಕೊಂಡ ಯಾರೊಬ್ಬರೂ ಅಂದು ಗೌಡ ಜನಾಂಗವನ್ನೂ ಸಮರ್ಥಿಸಿಕೊಳ್ಳುವ ಪ್ರಯತ್ನ ಮಾಡಲೇ ಇಲ್ಲ. ಆದರೆ ವಾಸ್ತವಿಕವಾಗಿ ನೋಡಿದಾಗ ಕೊಡಗಿನ ಗೌಡ ಜನಾಂಗ ಕೊಡಗಿನ ಪ್ರತಿಯೊಂದು ಸಮಸ್ಯೆಗಳ ವಿರುದ್ಧದ ಹೋರಾಟದಲ್ಲಿ ಸಕ್ರೀಯವಾಗಿ ಶತ ಶತಮಾನಗಳಿಂದ ಪಾಲ್ಗೊಳ್ಳುತ್ತಾ ಬರುತ್ತಿದೆ. ಇತರ ಜನಾಂಗಗಳಲ್ಲಿರುವಂತೆ ಗೌಡ ಜನಾಂಗದಲ್ಲಿಯೂ ಸಹ ತಾವು ಹಲವು ನಾಯಕರನ್ನು ಕಂಡಿದ್ದೇವೆ.ಎಲ್ಲಾ ಹೋರಾಟಗಳ ನಾಯಕತ್ವವನ್ನು ವಹಿಸದೇ ಹೋದರೂ ಹಿಂಬಾಲಕರಾಗಿ ಹೋರಾಟಗಳಲ್ಲಿ ಪಾಲ್ಗೊಂಡಿರುವುದು ಮತ್ತು ಪಾಲ್ಗೊಳ್ಳುತ್ತಿರುವುದನ್ನು ಅಂದಿನಿಂದ ಇಂದಿನವರೆಗೂ ಕಾಣಬಹುದಾಗಿದೆ. ಎಲ್ಲಾ ಜನಾಂಗಗಳನ್ನೂ ಒಟ್ಟಿಗೆ ಸೇರಿಸಿ ಸಮಸ್ಯೆಗಳ ವಿರುದ್ಧ ಹೋರಾಟವನ್ನು ಸಂಘಟಿಸಿರುವ ನಾಯಕತ್ವದ ಕೊರತೆಯಾದಾಗ ಕೆಲವು ಜನಾಂಗಗಳು ಹೋರಾಟದಿಂದ ಉಳಿಯಬಹುದು ಮತ್ತು ಅಂತಹ ಹೋರಾಟಗಳೂ ಸಹ ಯಶಸ್ಸನ್ನು ಪಡೆಯಲು ಸಾಧ್ಯವೂ ಆಗದು.

ಅದೇನೇ ಇರಲಿ ಕೊಡಗು ಇಂದು ಹಲವು ಸಮಸ್ಯೆಗಳನ್ನು ಎದುರಿಸುತ್ತಿದೆ. ಭಾರತದಲ್ಲೇ ತನ್ನದೇ ಆದ ವಿಶಿಷ್ಟ ಸಂಸ್ಕೃತಿ, ಸಂಪ್ರದಾಯ, ಶಿಸ್ತು, ಶೌರ್ಯ, ಪರಿಸರಗಳನ್ನು ಒಳಗೊಂಡಿರುವ ಈ ಜಿಲ್ಲೆ ಸರಕಾರದಿಂದ ನಿರ್ಲಕ್ಷಿಸಲ್ಪಡುತ್ತಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಇಲ್ಲಿನ ಜನರ ಅಸಂತುಷ್ಟತೆಯನ್ನು ಪರಿಗಣಿಸಿಯೇ ಭಾರತದ ಸಂವಿಧಾನ ಪರಾಮರ್ಶನಾ ಆಯೋಗದ ಅಧ್ಯಕ್ಷರು, ನಿವೃತ್ತ ಸುಪ್ರೀಂಕೋರ್ಟ್‌ನ ನ್ಯಾಯಾಧೀಶರೂ ಆಗಿರುವ ಎಂ.ಎಸ್. ವೆಂಕಟಾಚಲಯ್ಯನವರು ಕೊಡಗಿಗೆ ಪ್ರತ್ಯೇಕ ಅಭಿವೃದ್ಧಿಯೋಜನೆಯನ್ನು ರೂಪಿಸಲು ಶಿಫಾರಸ್ಸು ಮಾಡಿದ್ದಾರೆ. ಅವರ ಶಿಫಾರಸ್ಸು ಸಾಕಾರಗೊಂಡರೆ ಕೊಡಗು ಮತ್ತೆ ತನ್ನ ವೈಭವದ ಶಿಖರದೆಡೆಗೆ ಪ್ರಯಾಣ ಬೆಳೆಸಬಹುದು. ಆದರೆ ಸರಕಾರ ಈ ಶಿಫಾರಸ್ಸನ್ನು ಕಾರ್ಯಗತಗೊಳಿಸಬೇಕಾದರೆ ಸರ್ಕಾರದ ಮೇಲೆ ಒತ್ತಡವನ್ನು ಹೇರುವ ಸಂಘಟನೆ ಬೇಕಾಗಿದೆ. ಕೊಡಗಿನ ಎಲ್ಲಾ ಜನರೂ ಏಕ ವ್ಯಕ್ತಿಯಾಗಿ, ಏಕ ಧ್ವನಿಯಾಗಿ ಕೊಡಗಿನ ಅಭಿವೃದ್ಧಿಗೆ ಶ್ರಮಿಸಬೇಕಾಗಿದೆ.

ಹೋರಾಟಗಳನ್ನು ರೂಪಿಸುವ ಮೊದಲು ಕೊಡಗಿನ ಜನತೆ ಅನುಭವಿಸುತ್ತಿರುವ ಯಾತನೆ, ಶೋಷಣೆಗಳನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು. ಇದರಿಂದ ಬೇರು ಮಟ್ಟದ ವ್ಯಕ್ತಿಗಳೂ ಸಹ ಹೋರಾಟದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗುತ್ತದೆ. ಕೊಡಗಿನ ಜನ ಇಂದು ಹಲವಾರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗುತ್ತಿದ್ದಾರೆ. ಇಡೀ ರಾಜ್ಯಕ್ಕೆ,ನೆರೆಯ ರಾಜ್ಯಕ್ಕೆ ನೀರನ್ನೂ ನೀಡುವ ಕೊಡಗಿನ ಜನತೆ ಕುಡಿಯುವ ನೀರಿಗಾಗಿ ಪರದಾಡುವ ವ್ಯವಸ್ಥೆಯನ್ನು ಕಾಣುತ್ತೇವೆ. ಕೊಡಗಿನಲ್ಲಿ ವರ್ಷದಲ್ಲಿ ಒಟ್ಟಾರೆಯಾಗಿ ಆರು ತಿಂಗಳು ಮಾತ್ರ ವಿದ್ಯುತ್ ಸೌಲಭ್ಯವನ್ನು ಕಾಣಬಹುದು. ಎಷ್ಟೋ ಹಳ್ಳಿಗಳು ರಸ್ತೆ ಸಂಪರ್ಕವನ್ನು ಹೊಂದಲು ಇಂದಿಗೂ ಸಾಧ್ಯವಾಗಿಲ್ಲ. ಉನ್ನತ ಶಿಕ್ಷಣ, ಉದ್ಯೋಗಾವಕಾಶ ಮುಂತಾದ ಸಮಸ್ಯೆಗಳಲ್ಲದೆ, ಪ್ರತ್ಯೇಕ ಲೋಕಸಭಾಸ್ಥಾನದ ಅವಕಾಶವನ್ನು ಕೊಡಗಿಗೆ ನೀಡಲಾಗಿಲ್ಲ. ಕೊಡಗಿನ ಪ್ರಮುಖ ಬೆಳೆಗಳಾದ ಕಾಫಿ, ಏಲಕ್ಕಿ, ಕರಿಮೆಣಸು ಜೇನು, ಕಿತ್ತಳೆ ಮುಂತಾದ ಬೆಳೆಗಳೂ ಕೂಡ ಒಂದಲ್ಲ ಒಂದು ರೀತಿಯಲ್ಲಿ ಕೊಡಗಿನ ರೈತನಿಗೆ ಕೈಕೊಡುತ್ತಿದ್ದರೂ, ಆ ರೈತನ ರಕ್ಷಣೆಗೆ ಯಾವ ಸರ್ಕಾರವು ಧಾವಿಸುತ್ತಿಲ್ಲ. ಈ ಎಲ್ಲಾ ಸಮಸ್ಯೆಗಳ ದವಡೆಯಿಂದ ಕೊಡಗಿನ ಜನಸಾಮಾನ್ಯ ಪಾರಾಗ ಬೇಕಾದರೆ ಕೊಡಗಿಗೆ ಪ್ರತ್ಯೇಕ ಅಭಿವೃದ್ಧಿ ಯೋಜನೆ ರೂಪುಗೊಳ್ಳಬೇಕಾಗಿದೆ.

ಕೊಡಗಿಗೆ ಪ್ರತ್ಯೇಕ ಅಭಿವೃದ್ಧಿಯೋಜನೆಯನ್ನು ರೂಪಿಸುವಂತೆ ಸರಕಾರದ ಮೇಲೆ ಒತ್ತಡ ಹೇರುವ ಸಂಘಟಿತ ಒಟ್ಟಾರೆ ಹೋರಾಟ ರೂಪುಗೊಳ್ಳಬೇಕಾಗಿದೆ. ಅದು ಯಾವುದೇ ಒಬ್ಬ ನಾಯಕನ, ಅಥವಾ ಒಂದು ಗುಂಪಿನ ಅಥವಾ ಒಂದು ಜನಾಂಗದ ಜಾತಿಯ ಹೋರಾಟವಾಗಿರದೆ ಗೌಡ ಜನಾಂಗವೂ ಸೇರಿದಂತೆ ಕೊಡಗಿನ ಜನ ಸಾಮಾನ್ಯನ ಹೋರಾಟವಾಗಬೇಕಾಗಿದೆ. ಕೊಡಗಿನ ಎಲ್ಲಾ ಜನಾಂಗಗಳೂ ದ್ವೇಷ ತೊರೆದು ಸಾಮರಸ್ಯದಿಂದ ಒಗ್ಗೂಡಿದಾಗ ಜಿಲ್ಲೆಯ ಸಮಸ್ಯೆಗಳು ತನ್ನಿಂದ ತಾನೇ ಬದಿಗೆ ಸರಿಯಬಹುದು.

-ಪಟ್ಟಡ ಶಿವಕುಮಾರ್, ಉಪನ್ಯಾಸಕ, ಮದೆ.

ಅದ್ವೈತ ಕೊಂಡಾಡಿ ಇದ್ದುದನ್ನು ಹೋಗಾಡಿ

# 'ಸಂಸ್ಕೃತಿಯ ರಕ್ಷಣೆಗೆ ಸ್ತ್ರೀಯರಷ್ಟೇ ಜವಾಬ್ದಾರಿಯನ್ನು ಪುರುಷರೂ ಬೆಳೆಸಿಕೊಳ್ಳಬೇಕು'

***ಕೂಡಕಂಡಿ ಕಾವೇರಮ್ಮ ಸೋಮಣ್ಣ ತಾಕೀತು.***

ಇಂದು ನಮ್ಮ ಸಂಸ್ಕೃತಿ ಸಂಪ್ರದಾಯಗಳು ಮಾಯವಾಗುತ್ತಿವೆ. ನಮ್ಮ ಹಳೆಯ ಪದ್ಧತಿಗಳನ್ನು ಉಳಿಸಿಕೊಳ್ಳಬೇಕೋ, ಬೇಡವೋ ಎನ್ನುವ ಜಿಜ್ಞಾಸೆ ಇಂದು ಬೆಳೆಯತೊಡಗಿದೆ. ಪುರುಷ ಪ್ರಧಾನ ಸಮಾಜ ಸಂಸ್ಕೃತಿಯ ರಕ್ಷಣೆಯ ಜವಾಬ್ದಾರಿಯನ್ನು ಮಹಿಳೆಯರ ಮೇಲೆ ಹೊರಿಸಿ ತಾವು ತಪ್ಪಿಸಿಗಿದ್ದಾರೆ. ಮಹಿಳೆಯರು ಇಂದು ಸಾಕಷ್ಟು ರೀತಿಯಲ್ಲಿ ಸಂಸ್ಕೃತಿಯನ್ನು ಕಾಪಾಡುತ್ತಿದ್ದಾರೆ. ಆದರೆ ಪುರುಷರು ತಾತ್ಸಾರ ಭಾವನೆ ತಾಳುತ್ತಿದ್ದಾರೆ. ಇಂದು ಶವಸಂಸ್ಕಾರಗಳಲ್ಲಿ ಪಾಲ್ಗೊಳ್ಳುವಾಗ ಮಹಿಳೆಯರು ಬಿಳಿ ಬಟ್ಟೆ ಧರಿಸಿ ಸಂಪ್ರದಾಯ ಮೆರೆದರೆ ಪುರುಷರು ಅತ್ತ ಕಡೆಗೆ ಗಮನ ಹರಿಸದೆ ಬಣ್ಣದ ಬಟ್ಟೆ ಧರಿಸಿ ಪಾಲ್ಗೊಳ್ಳುತ್ತಿದ್ದಾರೆ. ಇದನ್ನು ಬಿಟ್ಟು ಮಹಿಳೆಯರಂತೆ ನಮ್ಮ ಜನಾಂಗದ ಪುರುಷರೂ ಸಹ ಸಂಸ್ಕೃತಿ ರಕ್ಷಣೆಯ ಜವಾಬ್ದಾರಿಯನ್ನೂ ಅರಿತು ಕಾರ್ಯಪ್ರವೃತ್ತರಾಗಬೇಕೆಂದು ಮಡಿಕೇರಿ ಪುರುಸಭೆಯ ಪ್ರಥಮ ಮಹಿಳಾ ಅಧ್ಯಕ್ಷೆಯಾಗಿರುವ ಕೂಡಕಂಡಿ ಕಾವೇರಮ್ಮ ಸೋಮಣ್ಣನವರು ಕರೆ ನೀಡದ್ದಾರೆ.

ಅವರು ಕಳೆದ ಮಾರ್ಚ್ 29 ರಂದು ಮಡಿಕೇರಿಯಲ್ಲಿ 'ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ' ಏರ್ಪಡಿಸಿದ್ದ 'ಕೊಡಗ್ ಗೌಡ ಸಂಸ್ಕೃತಿ' ಚರ್ಚಾಗೋಷ್ಠಿಯನ್ನು ಉದ್ಘಾಟಿಸಿ ಮಾತನಾಡಿ ನನಗೂ ಕೂಡ ಆಸೆ ಇದೆ. ನಮ್ಮ ಸಂಸ್ಕೃತಿಯ, ಉಳಿವಿನ ಬಗ್ಗೆ ಮಾರ್ಗದರ್ಶನ ನೀಡಿ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯಬೇಕೆಂದು ಅಭಿಪ್ರಾಯಿಸಿದರು.

**'ನಾಯಕರನ್ನು ಬೆಳೆಸೋಣ'- ಮಾವಾಜಿ ಬಾಲಕೃಷ್ಣ**

ಸಮಾರಂಬದಲ್ಲಿ ಮುಖ್ಯ ಅತಿಥಿಯಾಗಿ ಪಾಲ್ಗೊಂಡಿದ್ದ ಜನಾಂಗದ ಹಿರಿಯ ಮುತ್ಸದ್ದಿಯರಲ್ಲಿ ಒಬ್ಬರಾದ ಮಾವಾಜಿ ಬಾಲಕೃಷ್ಣರವರು ಮಾತನಾಡಿ ಶಾಲೆಯ ಮಕ್ಕಳು ಸಮವಸ್ತ್ರವನ್ನು ಧರಿಸುವುದರಿಂದ ಅವರಲ್ಲಿ ಒಳ್ಳೆಯ ಸಂಸ್ಕಾರಗಳು ಮೂಡುವಂತೆ ನಮ್ಮ ಪರಂಪರೆ, ಸಂಸ್ಕೃತಿಯನ್ನು ಬೆಳೆಸಿಕೊಂಡಾಗ ನಮ್ಮಲ್ಲಿ ಏಕತೆ ಮತ್ತು ಐಕ್ಯತೆ ಮೂಡಿ ನಾವು ಉತ್ಕರ್ಷೆಯ ಹಾದಿಯನ್ನು ತುಳಿಯಬಹುದೆಂದರು. ನಮ್ಮ ಯುವ ಜನತೆ ಗುರುಹಿರಿಯರನ್ನು ಗೌರವಿಸಬೇಕು. ಆದರೆ ನಮ್ಮಲ್ಲಿ ಗೌರವದ ಭಾವನೆ ಕುಂದಿ ಹೋಗಿ ಅಡಿಪಾಯವನ್ನೇ ಕಳೆದುಕೊಳ್ಳುತ್ತಿದ್ದೇವೆ. ನಮ್ಮ ಜನಾಂಗಕ್ಕೆ ಇಂದು 'ಗುರು ಇಲ್ಲ, ಗುರಿ ಇಲ್ಲ, ಚೌಕಟ್ಟು ಇಲ್ಲ' ಆದುದರಿಂದ ಪ್ರತಿ ಊರುಗಳಲ್ಲಿಯೂ ನಾವು ಬಡವ-ಶ್ರೀಮಂತ ಎನ್ನುವ ಬೇಧವನ್ನು ಬಿಟ್ಟು ನಮ್ಮ ಜನಾಂಗದ ನಾಯಕರನ್ನು ಬೆಳೆಸಬೇಕು. ಅದರ ಹಿಂದೆ ಒಂದುಗೂಡಬೇಕು ಎಂದು ಕರೆ ನೀಡಿದರು. ಆದರೆ ನಮ್ಮಲ್ಲಿರುವ ಕೆಲವೇ ಮಂದಿ ಶ್ರೀಮಂತರು ಒಕ್ಕಲಿಗರೊಂದಿಗೆ ಸಂಬಂದ ಬೆಳೆಸಿಕೊಂಡು ತಾವು ಒಕ್ಕಲಿಗರಾಗಲು ಹೊರಟಿರುವುದು ನಮ್ಮ ಜನಾಂಗದ ಬಹುದೊಡ್ಡ ದುರಂತ ಎಂದು ಬಣ್ಣಿಸಿದ ಅವರು ಮೊದಲು 'ನಾವು ನಾವಾಗಬೇಕು', ಇಂದು ನಾವು ಪರಸ್ಪರ ಸಹೋದರರ ನಡುವೆ ದ್ವೇಷ ಸಾಧಿಸುವುದರಲ್ಲಿಯೂ, ಶವದ ಮನೆಯಲ್ಲೂ ಸಹ ಪ್ರತಿಷ್ಠೆ ಮೆರೆಯುವಲ್ಲಿ ಮೊದಲ ಸ್ಥಾನದಲ್ಲಿದ್ದೇವೆ, ಅದು ಬಿಟ್ಟು ಸಮಾಜದಲ್ಲಿ ನಾವು ಮೊದಲ ಸ್ಥಾನಕ್ಕೇರಲು ಪ್ರಯತ್ನಿಸಬೇಕೆಂದು ಗೌಡ ಜನಾಂಗಕ್ಕೆ ಕಳಕಳಿಯ ಮನವಿ ಮಾಡಿದರು.

**'ಕೈಂಪೆ'ಯ ಕೊರತೆಯಿದೆ, ಬಂಟೋಡಿ ವೇಣುಗೋಪಾಲ:-**

ಸಮಾರಂಭದಲ್ಲಿ ಮತ್ತೊಬ್ಬ ಅತಿಥಿಯಾಗಿ ಭಾಗವಹಿಸಿದ್ದ 'ಗೌಡ ಸಂಘಟಕರಲ್ಲಿ' ಒಬ್ಬರಾದ ಬಂಟೋಡಿ ವೇಣುಗೋಪಾಲರವರು ಮಾತನಾಡಿ ನಾವಿಂದು ಅನ್ಯರ ಪ್ರಭಾವಕ್ಕೊಳಗಾಗಿ ನಮ್ಮ ನೈಜತೆಯನ್ನು ಕಳೆದುಕೊಂಡಿದ್ದೇವೆ. ನಮ್ಮ ಸಂಸ್ಕೃತಿಯನ್ನು ಕಳೆದುಕೊಂಡು ನಮ್ಮ ಸ್ವಾಭಿಮಾನವನ್ನು ಕಳೆದುಕೊಂಡಿದ್ದೇವೆ. ಆದುದರಿಂದ ನಮ್ಮತನವನ್ನು ಉಳಿಸಿಕೊಳ್ಳುವ 'ಕೈಂಪೆ'ಯನ್ನು ನಾವು ಬೆಳೆಸಿಕೊಳ್ಳಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದರು.

***ವಿದ್ಯಾವಂತರಿಂದಲೇ ಸಂಸ್ಕೃತಿಯ ಅವನತಿ :-ಕೂಡಕಂಡಿ ಅಪ್ಪಾಜಿ***

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಜನಾಂಗದ ಹಿರಿಯರಾದ ನಿವೃತ್ತ ವಾಯು ಸೇನಾನಿ ಕೂಡಕಂಡಿ ಅಪ್ಪಾಜಿಯವರು ಮಾತನಾಡಿ ಹಿಂದೆ ವಿದ್ಯಾವಂತರು ಇದ್ದಾಗಲೂ ನಮ್ಮ ಸಂಸ್ಕೃತಿ, ಸಂಪ್ರದಾಯ,ಪದ್ಧತಿಗಳನ್ನು ಬೆಳೆಸಿಕೊಂಡು ಬಂದಿದ್ದರು. ಆದರೆ ವಿಪರ್ಯಾಸವೆಂಬಂತೆ ನಮ್ಮ ಜನ ಇಂದು ವಿದ್ಯಾವಂತರಾಗುತ್ತಿದ್ದಂತೆ ನಮ್ಮ ಆಚರಣೆಗಳನ್ನು ಪದ್ಧತಿಗಳನ್ನು ಕಡೆಗಣಿಸುತ್ತಿದ್ದಾರೆಂದು ಖೇದ ವ್ಯಕ್ತ ಪಡಿಸಿದರು. 'ಕೊಡಗು ಸಂಗಾತಿ'ಯಂತಹ ಒಂದೇ ಒಂದು ಪತ್ರಿಕೆ ನಮ್ಮ ಜನಾಂಗದ ಹಿತ ಕಾಯುತ್ತಿದ್ದರೂ, ಅದನ್ನು ಕೊಂಡು ಓದಿ ಪತ್ರಿಕೆಯನ್ನು ಉಳಿಸಿಕೊಳ್ಳುವುದಕ್ಕೂ ನಮ್ಮ ಜನ ತಾತ್ಸಾರ ಹಿಂದೇಟು ಹಾಕುತ್ತಿದ್ದಾರೆ. ಇದನ್ನೆಲ್ಲ ಗಮನಿಸಿದರೆ ನಮ್ಮ ಜನಾಂಗವಿಂದು ಸಾಕಷ್ಟು ಸಂಕಷ್ಟದ ಹಾದಿಯನ್ನು ತುಳಿಯುತ್ತಿರುವಂತೆ ಭಾಸವಾಗುತ್ತಿದೆ. ಆದುದರಿಂದ ನಮ್ಮ ಜನತೆ ತಕ್ಷಣ ಎಚ್ಚೆತ್ತುಕೊಂಡು ತನ್ನ ರಕ್ಷಣೆಗೆ ತಾವೇ ಮುಂದಾಗಬೇಕೆಂದು ತಮ್ಮ ವಿಷಾದ ವ್ಯಕ್ತಪಡಿಸಿದರು.

ಚರ್ಚಾಗೋಷ್ಠಿಯಲ್ಲಿ ಕೂಡಕಂಡಿ ಕಾರ್ಯಪ್ಪ (ಬಾಬು), ಸೂದನ ನಾಣಯ್ಯ ಮೊದಲಾದವರು ಗೌಡ ಸಂಸ್ಕೃತಿಯ ಬಗ್ಗೆ ಮಾಹಿತಿ ನೀಡಿದರೆ, ಹಲವಾರು ಮಹಿಳಾ ಪ್ರಮುಖರು ಶೋಭಾನೆ ಮೊದಲಾದ ಸಂಸ್ಕೃತಿಯ ಬಗ್ಗೆ ಮಾಹಿತಿ ಒದಗಿಸಿದರು. ಕಾರ್ಯಕ್ರಮವು ದಂಬೆಕೋಡಿ ರಾಣಿ ಮಾಚಯ್ಯನವರ ಪ್ರಾರ್ಥನೆಯೊಂದಿಗೆ ಆರಂಭಗೊಂಡಿತು. ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್‌ರವರು ಸ್ವಾಗತಿಸಿದರೆ, ಕಾರ್ಯದರ್ಶಿ ಕೋಡಿ ಚಂದ್ರಶೇಖರವರು ವಂದಿಸಿದರು.

-ಪಟ್ಟಡ ಶಿವಕುಮಾರ್, ಉಪನ್ಯಾಸಕ, ಮದೆ

---

ಅದ್ವೈತ ಕೋಂಡಾಡಿ ಇದ್ದುದನ್ನು ಹೋಗಾಡಿ

# ಪತ್ರ ವಿಭಾಗ :1

To,
Kodagu
Sangathi
Mysore-17

*ಆತ್ಮೀಯ ಸಂಪಾದಕೀಯವರೇ,*

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ನವೀಕರಿಸುವ ಜ್ಞಾಪನ ಪತ್ರ ನಮಗೆ ತಲುಪಿರುವುದು. ನಾನು ಈ ಹಿಂದೆ ಪ್ರತಿ ತಿಂಗಳಿಗೆ ಎರಡು ಪತ್ರಿಕೆಯಂತೆ ವಾರ್ಷಿಕ ಚಂದಾ ರೂ. 150/- ಶುಲ್ಕವನ್ನು ನೀಡುತ್ತಾ ಬಂದಿರುವೆನು. ಆದರೆ ಈಗ ಕೇವಲ ತಿಂಗಳಿಗೆ ಒಂದೇ ಪತ್ರಿಕೆ ಹೊರ ಹೊಮ್ಮಿದೆ. ಮತ್ತು ಬಿಡಿ ಪ್ರತಿ ರೂ 12/- ಆಗಿರುವುದು. ಯಾವುದೇ ವಾರ ಪತ್ರಿಕೆ /Fertnightly ಕೇವಲ ರೂ 10/- ರಿಂದ ರೂ 12/- ಆಗಿರುತ್ತದೆ. ದಯವಿಟ್ಟು ನೀವು ಚಂದಾ ಶುಲ್ಕದ ಬಗ್ಗೆ ಇನ್ನೊಮ್ಮೆ ಪರಿಶೀಲಿಸಿದರೆ, ನಿಮಗೆ ಅನೇಕರು ಒಲೆಗೊಂದರಂತೆ ಸದಸ್ಯರಾಗಬಹುದೆಂಬುದು ನನ್ನ ಅಭಿಪ್ರಾಯ. ಅದೇ ರೀತಿ ನಾನು ನೀಡಿದ ಜಾಹಿರಾತು ಪ್ರಕಟಣೆ ಆಗಿದೆ. ಆದರೆ ನಿಮ್ಮ ರಶೀದಿಯಂತೆ ಅದು 1/4 ಪುಟ ಇರುವುದಿಲ್ಲ. ಅಂದರೆ 51/2cm ಇರುವುದಿಲ್ಲ. ಕೇವಲ 4cm ಇರುವುದು. ಅಲ್ಲದೆ ದಿ|| ಪಟ್ಟಡ ಕಾರ್ಯಪ್ಪ ಮುತ್ತಣ್ಣನವರದು 1/4 ಪುಟ ಇರುವುದು. ದಯವಿಟ್ಟು ಇದರ ಬಗ್ಗೆ ಕೂಡ ಆಲೋಚಿಸಿ ಈ ಪತ್ರವನ್ನು ಪತ್ರಿಕೆಯಲ್ಲಿ ಪ್ರಕಟಿಸಿದ ನಂತರ ನಿಮ್ಮ ಉತ್ತರದ ಮೇರೆಗೆ ನಾನು ನವೀಕರಿಸುವ ತೀರ್ಮಾನ ಮಾಡಲಾಗುವುದು.

-ತೇನನ ರಾಜೇಶ್ ಸೋಮಣ್ಣ, ಬೆಂಗಳೂರು

*ಪ್ರಿಯ ಚಂದದಾರರೆ* :- ಹೆಚ್ಚಿನವರು ಪತ್ರಿಕೆಯ ಬೆಲೆ ಬಗ್ಗೆ ಮಾತ್ರ ಮಾತಾಡುತ್ತಾರೆ. ನಮ್ಮದು 2,500 ಪತ್ರಿಕೆಯಿಂದ ಇಂದು ಕೇವಲ 750 ಪತ್ರಿಕೆಗೆ ಇಳಿಮುಖವಾಗಿದೆ ಎನ್ನುವ ಅಂಶ ತಿಳಿಸಲು ವಿಷಾದಿಸುತ್ತೇವೆ. ಆದರೂ ಪತ್ರಿಕೆಯನ್ನೂ ನಡಿಸುತ್ತಿದ್ದೇವೆ. ಯಾಕೆ?ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿ" ಅನ್ನುವ ವಾಕ್ಯದಲ್ಲಿ ನಮಿಗೆ ನಂಬಿಗೆ ಇದೆ. ಅದಕ್ಕಾಗಿ ನಾವ್ ಮೈಸೂರಿನಿಂದ ಪತ್ರಿಕೆ ನಡ್ಸಿ ಹೊಟ್ಟೆ ಹೊರೆಯೊದಕ್ಕೆ ಮಾಡಿದ್ದಲ್ಲ ಅನ್ನುವ ಅಂಶವನ್ನು ಇಂದು ನಿಮ್ಮ ಮುಂದೆ ಹೇಳಲು ಇಚ್ಛಿಸುತ್ತೇವೆ. ಇದು ಹೊಟ್ಟೆಪಾಡಿಗಾಗಿ ನಡ್ಸುವ ಪತ್ರಿಕೆ ಅಲ್ಲ. ಇತರ ಪತ್ರಿಕೆಗಳಂತೆ 25,30,50 ಸಾವಿರದಂತೆ ಅಥವಾ ಸುಧಾ,ತರಂಗದಂತೆ ಲಕ್ಷಾಂತರ ಪ್ರತಿಗಳು ಓಡುತ್ತಿಲ್ಲ. ಕೇವಲ 750 ಮಾತ್ರ. ಈ 750,ಪತ್ರಿಕೆ 25,000 ಸಾವಿರದೊಡನೆ ಸ್ಪರ್ಧೆಗಿಳಿಯಬೇಕು. ಈಗದು ಸಾಧ್ಯವೇ? ನೀವೇ ಹೇಳಿ? ಅದು ಅಲ್ಲದೆ, ಸಂಗಾತಿಗೆ 2.1/2-3 ಲಕ್ಷದಷ್ಟು ಚಂದ ಹಣ ಬರಲಿದೆ. ಅದು ಬಡವರ ಹಣ ಅಲ್ಲದೆ ಶ್ರೀಮಂತರ ಪಾಲು ಇದೆ ಅನ್ನುವ ಅಂಶವನ್ನು ತಿಳಿಸಬೇಕಾಗಿದೆ. ಈಗಿನ ಖರ್ಚುವೆಚ್ಚಗಳನ್ನು ಸರಿದೂಗಿಸಲು ಒಂದು ಮುದ್ರಣಕ್ಕೆ ಇತರ ಖರ್ಚುಗಳು ಕನಿಷ್ಠ 12-15 ಸಾವಿರ ಬೇಕಾಗುತ್ತದೆ. ನಮ್ಮ ಪತ್ರಿಕೆ ಇತರ ಪತ್ರಿಕೆಗಳಂತೆ ಸರಳವಾಗಿ ಮಡಚಿ ಕಳುಹಿಸುವುದು ಅಲ್ಲ, ಪೊಲ್ಡಿಂಗ್ ಆಗಬೇಕು, 3 ಪಿನ್ನ್ ಹಾಕಬೇಕು, ವಿಳಾಸ ಬರೆಯಬೇಕು, ಸ್ಟ್ಯಾಂಪ್‌ಹಚ್ಚಬೇಕು, ಜ್ಞಾಪನಪತ್ರ ಇಡಬೇಕು. ಪೋಸ್ಟ್ ಮಾಡಬೇಕು, ದೂರವಾಣಿ ಖರ್ಚು ಸಂಬಳ ಭತ್ಯೆ, ಬಾಡಿಗೆ, ಕರೆಂಟ್‌ಬಿಲ್, ಪೆಟ್ರೋಲ್ ಇತ್ಯಾದಿ ಖರ್ಚು ವಿಪರೀತವಾಗಿದೆ. ಚಂದ ಹಣ ಕೇವಲವಾಗಿ ನವೀಕರಣವಾಗುತ್ತಿದೆ. ನಮ್ಮ ಪತ್ರಿಕೆಯ ಋಣಹಣ ಹೆಚ್ಚಿನ ಓದುಗರು/ಚಂದದಾರರಲ್ಲಿಯೇ ಇರುತ್ತದೆ. ಜಾಹಿರಾತುಗಳು ಕಮ್ಮಿ. ನಮ್ಮ ಪತ್ರಿಕೆಗೆ ಜಾಹಿರಾತು ನೀಡದೆ ಬೇರೆ ಇತರ ಪತ್ರಿಕೆಗಳಿಗೆ ಜಾಹಿರಾತು ನೀಡುವ ಜನ ನಮ್ಮವರಲ್ಲಿ ಸಾಕಷ್ಟು ಇದ್ದಾರೆ. ಕೈ ಕಾಲು ಎಳೆಯುವ ಪ್ರವೃತ್ತಿ, ಹೊಟ್ಟೆಕಿಚ್ಚು, ದ್ವೇಷ, ಮದ, ಮತ್ಸರ, ಹಠಮಾರಿತನ ಇತ್ಯಾದಿಗಳ ಆಖಂಡವಾಗಿರುವ ಯಾವುದೇ ಸಮಾಜವನ್ನು ತಿದ್ದಲೊಗುವ ವ್ಯಕ್ತಿ ಮೂರ್ಖನಾಗುವ ಅತೀ ಶೀಘ್ರದಲಿ.

ಸಾಮಾನ್ಯವಾಗಿ ನಾವು 1/4ಪುಟ, 1/2 ಎಂದು ಇಲ್ಲಿ ತನಕ ಸರಿಯಾಗಿಯೇ ಹಾಕಿರುತ್ತೇವೆ. ಆದರೆ ಈ ಸರ್ತಿ ಕೊನೆ ಗಳಿಗೆಯಲ್ಲಿ "ಚಿರಸ್ಮರಣೆ" ನೀಡಲೆ ಬೇಕಾಗಿದ್ದರಿಂದ ಸ್ಥಳದ ಅಭಾವದಿಂದ ಒಂದು ಪೇಜಿನಲ್ಲಿ ಐದು ಭಾಗವಾಗಿದ್ದು ಸರಿಯಷ್ಟೆ. ಈ ಜಾಹೀರಾತು ಬರುವಾಗ ಒಳಪುಟಗಳು ಮುದ್ರಣವಾಗಿತ್ತು. ಎಲ್ಲಿಯೂ ಸಹ ಹೊಂದಾಣಿಕೆ ಮಾಡಲಾಗದ್ದರಿಂದ 1/4ಪುಟದ ಬದ್ದಲು 1/5ಭಾಗವಾಗಿದೆ. ಅಷ್ಟೇ ಅಲ್ಲದೆ ದಿ|| ಪಟ್ಟಡ ಮುತ್ತಣ್ಣನವರ ಚಿರಸ್ಮರಣೆಗೂ ಇನ್ನಿತರ ವಿಷಯಗಳಿಗೂ ತಾವು ಅಷ್ಟೊಂದು ಆಸಕ್ತಿ ವಹಿಸದಿರುವುದುಲೇಸೆಂದು ನಮ್ಮ ಅಭಿಪ್ರಾಯವಾಗಿದೆ. ಜಾಹಿರಾತುಗಳು ಹೆಚ್ಚು ಬರಬೇಕು ನಿಜ, ಆದರೆ ಬರುತ್ತಿಲ್ಲ ಯಾಕೆ?

ಮುಂದೆ ತಿಂಗಳಿಗೆ 2 ಪತ್ರಿಕೆ ತರುತ್ತೇವೆ ಅನ್ನುವ ವಿಚಾರದಲ್ಲೆ ನಾವಿಂದು ಇದ್ದೇವೆ. 2000 ಪತ್ರಿಕೆಗಳಿಂದ ಸರಿಯಾಗಿ ಚಂದ ಹಣ ವರ್ಷಂಪ್ರತಿ ಪಾವತಿಯಾಗುತ್ತಿದ್ದರೆ ಈ ಹಿಂದಿನಂತೆ ನೀಡಲು ಖಂಡಿತ ಪ್ರಯತ್ನಿಸುತ್ತೇವೆ. ಪತ್ರಿಕೆಯು ವರ್ಷಕ್ಕೆ 150/-ರೂಪಾಯಿಗಳು ಇದ್ದದು ಅದಕ್ಕಿಂತ ಕಮ್ಮಿ ಮಾಡಲೊದರೆ ಪತ್ರಿಕೆ ನಡೆಸುದಂತೂ ಕನಸಾಗಿದೆ. ಕೊಡಗು ನಾಡಿಗೆ ಮತ್ತು ಜನರಿಗೆ ಪತ್ರಿಕೆಯ ಇರುವಿಕೆ ಮುಖ್ಯ. ಜನಾಂಗದ ಕೆಲವು ಸಂಘ ಸಂಸ್ಥೆಗಳು ಎಳ್ಳಿನಷ್ಟು ಸಹಕಾರ ನೀಡುತ್ತಿಲ್ಲ.

ಅದಕ್ಕಾಗಿ ನಮ್ಮ ಹೋರಾಟ ಇದೆ ಬೆಲೆಗೆ ಪತ್ರಿಕೆಯು ತಿಂಗಳಿಗೆ ಒಂದು ಈಗ ಇದ್ದೆ ಇದೆ. ಹಾಗೆಯೇ 2 ತಿಂಗಳಿಗೊಂದು ಅಥವ 6 ತಿಂಗಳಿಗೊಂದು, ಅಥವ ವರ್ಷಕ್ಕೊಂದು ಇಲ್ಲವಾದಲ್ಲಿ ನಿಂತೆ ಹೋಗುವ ಪ್ರಸಂಗ ಬಂದರು ಬರಬಹುದು. ಅದಕ್ಕಾಗಿ ಈಗಿರುವ ಕನಿಷ್ಠ ಬೆಲೆಯನ್ನು ಉಳ್ಸಿಕೊಂಡು ನಿಯತ್ತಾಗಿ ಹಣ ನೀಡುವ ಸಾಹಿತ್ಯಾಭಿಮಾನಿಗಳು, ಲೇಖಕರು, ಬರಹಗಾರರು, ಹಿತೈಷಿಗಳು, ದಾನಿಗಳು, ಉದಾರಿಗಳು, ಹೃದಯ ಸಿರಿವಂತಿಕೆಯ ಅಭಿಮಾನಿಗಳಿಂದ ನಡೆಸಲು ಸಾಧ್ಯವಿದೆ ಎನ್ನುವ ಅಚಲ ನಂಬಿಕೆ ನಮಗಿದೆ. ಈಗಾಗಲೇ "ಗೌಡ ಬರಹಗಾರರ ವೇದಿಕೆ" ಅಸ್ಥಿತ್ವಕ್ಕೆಬರಲಿದೆ. ಮುಂದೆ ಎಲ್ಲವೂ ಅನುಕೂಲವಾದಾಗ ಖಂಡಿತ ಎಲ್ಲವು ಸರಿಯಾಗುವುದು ಎಂದು ನಾವು ನಂಬಿದ್ದೇವೆ. ಉತ್ತಮ ಬರಹಗಾರರ ಮತ್ತುಉಪಸಂಪಾದಕ, ಸಹ ಸಂಪಾದಕ ಹುದ್ದೆ ಸೃಷ್ಟಿಸುವಂತೆ ಅಭಿಪ್ರಾಯ ಇದೆ. ಇಲ್ಲಿಹಣ ಮುಖ್ಯ ಅಲ್ಲ. ಪ್ರಯತ್ನ ಮುಖ್ಯವಾಗಿದೆ. ಗೌರವ ಸಂಪಾದಕರಿಗೆ ಸಹಕರಿಸಲು ಮಂಡಳಿಯ ಕೊರತೆ ಇದೆ. ಸಮಯದ ಅಭಾವವು ಇದೆ. ಎಲ್ಲವನ್ನು ಒರೆಯಲ್ಲಿಟ್ಟು ನಿಭಾಯಿಸುವುದ ಸಂಪಾದಕಿ, ಗೌರವ ಸಂಪಾದಕರನ್ನು ಅತಿ ಸಮೀಪದಿಂದ ಬಲ್ಲವರಿಗೆ ಮಾತ್ರ ಗೊತ್ತೆನ್ನುವ ವಿಚಾರದ ಮಾತನ್ನು ಹೇಳುತ್ತಾ ಬಾಕಿ ಬರಲಿರುವ ಚಂದ ಹಣವು ಈ ಕೂಡಲೇ ಕೈ ಸೇರಿ ಎಲ್ಲವು ಸುಗಮವಾಗಿ ನಡೆಯಲಿ ಎಂದು ಕುಲಗುರು ವೆಂಕಟರಮಣಹಾಗೂ ತಾಯಿ ಶೃಂಗೇರಿಯನ್ನು ಬೇಡುವೆವು.

-ಪಟ್ಟಡ ಪ್ರಭಾಕರ, ಗೌರವ ಸಂಪಾದಕರು

---

ಅನ್ನ ದೇವರ ಮುಂದೆ, ದೇವರುಂಟೇ ಇನ್ನು

To,
Kodagu
Sangathi
Mysore-17

# ಪತ್ರ ವಿಭಾಗ: 2

ಕೊಡಗು ಸಂಗಾತಿ ಮಾಸಿಕ ಪತ್ರಿಕೆ ಸಂಪಾದಕಿ ಮತ್ತೆ ಆಡಳಿತದವುಕ್ಕೆ ಕಡ್ಲೀರ ಸಂಜಿ ಮಂದಪ್ಪನು ಮಾಡುವ ಅನಂತಾನಂತ ನಮಸ್ಕಾರಗ. ನೀವ್ ಕೊಡಗ್ ಸಂಗಾತಿ ಪತ್ರಿಕೆ ಭಾರಿ ಕಷ್ಟಲಿ ನಡ್‌ಸ್‌ತ್ತ ಇರ್ದು ತುಂಬಾ ವಿಷಾದದ ಸಂಗತಿ. ಪತ್ರಿಕೆನ ನಡ್ಸುದು ಅಸ್ಟ್ ಸುಲಭದ ಕೆಲಸವೇನಲ್ಲ. ಆದರೆ ಸಂಗಾತಿ ಪತ್ರಿಕೆಯ ಸಂಪಾದಕರು ನಮ್ಮ ಮಾತೃಭಾಷೆಗೆ ಅಸ್ಕಾಗಿ ಪ್ರಾಮುಖ್ಯ ಕೊಡ್ತ ಇಲ್ಲೆತ ನನ್ನ ಅನಿಸಿಕೆ. ಏಕೆತರೇಳಿ ಮೈಸೂರ್‌ಲಿ ಇರ್‌ವ ನಮ್ಮ ಜನಾಂಗದ ಕೆಲವು ಹೇಳಿವೆ. ಪಟ್ಟಡವು ಪುಸ್ತಕಲಿ ಮಾತ್ರ ಅರೆಭಾಷೆ ಮಾತಾಡುಕುಕ್ಕುತ್ತೇಳಿ ಜೋರಾಗಿ ಹಾಕುವೆ. ಅವು ಮಕ್ಕಳೊಟ್ಟಿಗೆ ಮಾತಾಡ್ದು ಕನ್ನಡತ ಹೇಳ್ತ ಒಳೊ. ಹಂಗೆನೆ ಗೌಡ ಸಮಾಜ, ಗೌಡ ಸಂಸ್ಕೃತಿಕ ಅಕಾಡೆಮಿಲಿ ಅದರ ಅಧ್ಯಕ್ಷರ್ ಮತ್ತೆ ಪದಾಧೀಕಾರಿಗ ಅರೆಭಾಷೆ ಮಾತಾಡುತ ಸಭೆ ಸಮಾರಂಭಲಿ ದೊಡ್ಡದಾಗಿ ಭಾಷಣ ಬಿಗ್‌ದವೆ. ಆದರೆ ಅವು ಅವರ ಮಕ್ಕಳಿಗೆ ಮಾತ್ರ ಅರೆಭಾಷೆ ಕಲ್ಸುಲೆ. ಅಕಾಡೆಮಿ ಅಧ್ಯಕ್ಷರ್‌ತ್ತೇಳಿ ಕಂಬದಸ್ಟೆ ಹೋರ್ರುಉಡುಪು ಗಿಡುಪುಲಿ ಹೋದು ಎಲ್ಲಿ ಸ ಕಾಂಬಲೆ. ಸಂಸ್ಕೃತಿ ಸಂಪ್ರದಾಯಗಳ ಪಾಲಿಸುದು ಎಲ್ಲಿ ಸದಾ ಕಂಡತ್ತಲೆ ಇದ್ ನಾವ್ ದಿನ ನಿತ್ಯ ಕಾಣ್ತೊಲೊ. ಹಂಗೆನೆ ನಮ್ಮ ಜನಾಂಗದವು ಸಭೆ ಸಮಾರಂಭ, ಆಟೋಟ ಎಲ್ಲಾ ನಡ್‌ಸ್‌ಕೆ ಇರ್ದು ತುಂಬಾ ಸಂತೋಷ. ಆದರೆ ಬರೆ ಸಭೆ ಸಮಾರಂಭ, ಆಟೋಟ ನಡ್ಸರೆ ಸಾಲ್ದ್, ನಿಜವಾಗಿ ನಮ್ಮ ಜನಾಂಗಕ್ಕಾಗಿ ಇದರಿಂದ ಯಾವ ಪ್ರಯೋನಾಗ್‌ತ್‌ಲ್ಲೆ. ಆದ್ದರಿಂದ ನಮ್ಮ ಜನಾಂಗಡವು ಎಲ್ಲ ಸೇರಿಕಂಡ್ ಮೊದಲಾಗಿ ನಮ್ಮ ಜನಾಂಗಲಿ ಆರ್ಥಿಕವಾಗಿ ಹಿಂದುಳಿದವರ ಗುರ್ತಿಸಿಕ್ಕಂಡ್ ಅವುಕ್ಕೆ ಆರ್ಥಿಕ ಸಹಾಯ ಮಾಡ್ರೆ ಆಗ ಜನಾಂಗ ಮುಂದುವರೆಕೆ ಸಾಧ್ಯ ಉಟ್ಟು. ಹಂಗೆನೇ ಹಿಂದಿನ ಸಂಚಿಕೆಲಿ ಪಟ್ಟಡ ಶಿವಕುಮಾರ್‌ನವು ತಿಳ್ಸಿದಂಗೆ ನಮ್ಮ ಸಂಸ್ಕೃತಿನ ಆಡಂಬರದ ಮದ್ವೆ ಸಮಾರಂಭಗಳಲ್ಲಿ ಕಾಣ್ತ ಇಲ್ಲೆ. ಅಂದರೆ ಅದ್ ಇನ್ನ್ ಮುಂದೆ ನಮ್ಮ ಜನಾಂಗಲಿ ನಮ್ಮ ಸಂಸ್ಕೃತಿನ ಮುಂದುವರ್ಸಿಕಂಡ್ ಹೋಕೆ ನಮ್ಮ ವರಿಂದ ಸಾಧ್ಯಾದುಲೆತ ನಾನ್ ಹೇಳ್ಳೆ. ಅದ್ ಬುಟ್ಟ್ ಮದ್ವೆ ಸಮಾರಂಭಗಳ್ಲಿ ನಮ್ಮ ಜನಾಂಗಲಿ ಮದುಮಣ ಮತ್ತೆ ಮದುವಳಿಗೆ ಶೂ, ಸಾಕ್ಸ್, ಚಪ್ಪಲ್ ಹಾಕ್ಕಂಡ್ ಮುಹೂರ್ತಕ್ಕೆ ಕೂರಿಕೆ ಶುರು ಮಾಡ್ಯೊಲೋ. ನಮ್ಮ ಜನಾಂಗದವು ಬೇರೆ ಸಮಯಲಿ ಯಾವುದೇ ಸಮಾರಂಭ ಮತ್ತೆ ಮನೆಲಿ ಸಂತೆಲಿ ದದ್ದ್ ಚಪ್ಪಲಿ ಹಾಂಕಂಡಿದ್ದವೆ. ಅವು ಮದ್ವೆಲಿ ಮಾತ್ರ ಶೂ, ಚಪ್ಪಲ್ ಹಾಕ್ಕಂಡ್ ಮೆರೆದಾಡುವೆ.ಇದು ನ್ಯಾಯನ?

ಹಿಂಗೆ ನಮ್ಮ ಸಂಸ್ಕೃತಿನ ಮತ್ತೆ ಭಾಷೆನ ಉಳ್ಸಿಕಂಬಕ್ಕೆ ನಮ್ಮ ಜನಾಂಗವು ಸಭೆ ಸಮಾರಂಭಲಿ ಮಾತ್ರ ಬೊಬ್ಬೆ ಹಾಕುದಲ್ಲದೆ ಕಾರ್ಯರೂಪಕ್ಕೆ ತಾಕೆ ಯಾರಿಂದಲು ಆದುಲೆ. ಮೊದ್ಲು ನಮ್ಮ ಭಾಷೆನ ಮುಂದೆ ತರುವಂತ ಕೆಲ್ಸನ ಪ್ರಯತ್ನನ ನೀವ್ ಪತ್ರಿಕೆಯವು ಮಾಡಕ್ಕು, ಅಂದರೆ ಮಾತ್ರ ನಾನ್ ಸಂಗಾತಿ ಚಂದನ ಮುಂದುವರ್ಸಿನೆ. ನಾನ್ ಈ ಹಿಂದೆ ಪುಸ್ತಕ ನಂಗೆ ಬೇಡತಾ ತಿಳ್ಸಿದ್ದೆ, ಆದರೆ ನೀವ್ ಕಳ್ಸತಾ ಒಳರಿ. ಹಂಗಾಗಿ ನಂಗೆ ಇನ್ನ್ ಮುಂದೆ ನಮ್ಮ ಭಾಷೇನ ಮುಂದೆ ತಾಕೆ ನೀವ್ ಪ್ರಯತ್ನ ಪಟ್ಟರೆ ಮಾತ್ರ ನನ್ನ ಚಂದ ಹಣ ಕಳ್ಸಿನೆ.ನೀವ್ ಏನ್ ಹೇಳಿರೆ?

## ಪ್ರಿಯ ಚಂದದಾರರೇ,

ನಿಮ್ಮ ಪತ್ರದ ಸಾರಾಂಶ ಮನವರಿಕೆ ಆತ್. ನಾವ್ ಪತ್ರಿಕೆಯವು ಪತ್ರಿಕೆಲಿ ಹಾಕುವೆ. ನೀವ್ ಓದುಗರ್, ಜನಾಂಗಲಿ ಹುಟ್ಟಿದ್ಮೇಲೆ ನಿಮಗಾಗಿಯೇ ಹಲವಾರ್ ಸಂಘ, ವಿದ್ಯಾಸಂಘ, ಅಕಾಡೆಮಿ, ಮಹಿಳಾ ಒಕ್ಕೂಟ, ಸಮಾಜಗ ಒಳೊ. ಎಲ್ಲಾ ವಿದ್ಯಾವಂತರ್, ಹಣವಂತರ್, ಬುದ್ಧಿವಂತರ್‌ತ್ತೇಳ್ವ ಜನ ಗೌಡ ಕುಲಸ್ಥರ್‌ಲ್ಲಿ ಸಾಕಸ್ಟ್ ಒಳೊ. ನಾವ್ ನೀವ್ ಹೇಳ್ದಂಗೆ ಮಾಡಿರೆ ಈ ಮ್ಯಾಲೆ ಹೇಳಿದ ಸಂಘ ಸಂಸ್ಥೆಗಳ ಅಧ್ಯಕ್ಷರ್‌ಗ, ಪದಾಧೀಕಾರಿಗಳಿಗೆ ಎಂತ ಕೆಲ್ಸ ಇದ್ದದೆತ ನೀವೇ ಹೇಳಕ್ಕು. ಪತ್ರಿಕೆ 5 ವರ್ಷಂದ ಪದೆ ಪದೆ ಹೇಳ್‌ತ್ತ ಹೇಳ್‌ತ ಸುಸ್ತಾಗುಟ್ಟು. ಬೋರ್ಗಲ್ಲ ಮ್ಯಾಲೆ ಮಳೆ ಹೊಡ್ದಂಗೆ ಆಗುಟ್ಟು. ಈಗ ನಾವ್ ಸಹ ಸುಸ್ತು ಆಗೋಲೊ. ಈಗ ನೀವ್ ಹೇಳಿ? ನಾವ್ ಯಾವ ರೀತಿ ಮಾಡ್ದುತ, ಹಂಗೆ ಬರ್ದ್ ಕಳ್ಸಿ, ನಾವ್ ಪ್ರಕಟಿಸುವೆ. ಎಲ್ಲೀತನ್ಕ ದ್ವೇಷ, ಹೊಟ್ಟೆ ಕಿಚ್ಚು, ಕೇಡ್, ಮತ್ಸರ, ಕಾಲೆಳೆವ ಪ್ರವೃತ್ತಿ ನಿಲ್ಲುದಿಲ್ಲಯೋ ಅಲ್ಲಿತನ್ಕ ನಾವಂತ್ ಉದ್ಧಾರಾಕೆ ಕಷ್ಟ ಸಾಧ್ಯತ್ತೆಳಕ್ಕ್. ನೀವ್ ಯಾಕೆ ಅವರಿವರ ಮಾತನ್ನ ಕೇಳಿರೆ. ಸೀದಾ ನಮ್ಮಲ್ಲಿಗೆ ಬನ್ನಿ, ವಿಚಾರ ಆಗ ನಿಮಿಗೆ ಗೊತ್ತಾದೆ.

-ಪಟ್ಟಡ ಪ್ರಭಾಕರ

## ನಾ ಕಂಡ ಕನಸು

ಬಾರತ ಮಾತೇಯು ಬಂದಳು
ಕಣ್ಣೀರು ಸುರಿಸುತ್ತ
ಓ.....ಕಂದಾ ಓ...ಕಂದಾ ಓ..ಕಂದಾ
ನನ್ನ ನೀ ಒಮ್ಮೆ ನೋಡು
ಎನ್ನ ಶರೀರದಿ ಆದ ಗಾಯವ
ಎಂದು ಹೇಳಿದಳು ತಾಯಿ
ಎಲ್ಲಿ ತಾಯಿ ಯಾರಿಂದಾಗಿ ಈ ಗಾಯ
ಎಂದು ನಾ ಕೇಳಿದೆನು
ಅರಿತು-ಅರಿತು ನೀ
ಪ್ರಶ್ನೆಯ ಯಾಕೇ ಕೇಳುವೆ ಕಂದಾ
ಹಿಂದೂ-ಮುಸ್ಲಿಂ-ಕ್ರೈಸ್ತರೆಂದು
ನೀವೇ-ನೀವೆಯಾಕೆ ಹೊಡೆದಾಡಿರಿ
ಇರಿದ ಗಾಯವಿದು ಕಂದಾ
ಉರುಳಿತುಸಾವಿರಾರು ಮುಗ್ಧ ಜನರ ಪ್ರಾಣ (ರೈಲು ದುರಂತದಲ್ಲಿ)
ಉರಿಯುವ ಬೆಂಕಿಗುಜರಾತ್‌ಲ್ಲಿ
ನಾಶವಾಯ್ತುಅಮೂಲ್ಯಜನರ ಸಜೀವ ದಹನ
ನನ್ನಯ ಈ ದುಃಖಿದ ಕಥೆಯನ್ನು
ಅರಿಯದಾದೇ ಕಂದಾ
ಸ್ನೇಹವ ಬೆಳೆಸಿ
ಒಟ್ಟಿಗೆ ಬಾಳಿ ಈ ಜಗತ್ತಿನಲ್ಲಿ

**ರಚನೆ: ಹರಿಣಿಗೋಪಾಲ್ ಚೇತನ್**
ಮಜಲುಗದ್ದೆ ಮನೆ ವಿಜಯನಗರ ಬೆಂಗಳೂರು.

# ಬಾಲ ಸಂಗಾತಿ ವಿಭಾಗ: ಕಥೆ: ಹಾಲೊಳ್ಗೆ ಬೆಣ್ಣೆ

ಒಂದು ದಿನ ಅಕಬರ್ ಚಕ್ರವರ್ತಿ ಬೀರಬಲ್‌ನ ಕರ್ದ್ ಕೇಳ್ದ್. ಏ ಬೀರಬಲ್ಲ ನೀನ್ ಬಹಳ ಬುದ್ಧಿವಂತ ಅಲ ನನ್ನ ಪ್ರಶ್ನೆಗಳಿಗೆ ಉತ್ತರ ಹೇಳ್ ನೋಡ್ರೊಂತ.

$ BÌÚj(bkÄ% K'"? ಹೆಂಗೆ ಉಟ್ಟು? ಮತ್ತೆ ಏನ್ ಮಾಡುತ್ತುಟ್ಟು? ಬೀರಬಲ್ಲ ಉತ್ತರ ಹೇಳಿಕೆ ನಂಗೆ ಒಂದು ವಾರ ವಾಯಿದೆ ಬೇಕ್‌ತ್ ಕೇಳ್ದ್. ರಾಜ ಒಪ್ಪಿದೆ. ಯೋಚನೆ ಮಾಡಿಕಂಡೇ 6 ದಿನ ಕಳ್ದ್ ಹೋದೆ. ಇನ್ನ್ ಒಂದೇ ದಿನ ಇರ್ದ್ ಬೀರಬಲ್ಲಂಗೆ ಉತ್ತರ ಗೊತ್ತಾಗದೆ ತಲೆ ಬಿಸಿ ಆದೆ. 7 ನೇ ದಿನ ಅಂವ ಸುತ್ತಾಡಿ ಕಂಡ್ ಯಮುನಾ ಹೊಳೆ ಹತ್ರ ಹೋದೆ ಅಲ್ಲಿ ದನ ಕಾಯುವ ಗೋಪಾಲ ಬೀರಬಲ್ಲನ ನೋಡಿ ಯಾಕೆ ಇಷ್ಟ್ ಚಿಂತೆ ಮಾಡ್ತಾ ಒಳರಿ ಅಂತ ಕೇಳ್ದ್. ಆಗ ಬೀರಬಲ್ಲ ನಡ್ದ ವಿಷಯನ ಹೇಳ್ದ್. ಗೋಪಾಲ ಅದಕ್ಕಾಕೆ ಇಷ್ಟ್ ಚಿಂತೆ ಅದರ ಉತ್ತರ ನಂಗೆ ಗೊತ್ತುಟು ತೇಳ್ದ್. ಹಂಗಾರೆ ಹೇಳ್ ತೇಳ್ದ್ ಬೀರಬಲ್ಲ. ನಾಳೆ ನಾನೆ ಬಂದ್ ರಾಜ ಸಭೆಲಿ ಹೇಳ್ನೆ ತೇಳ್ದ್ ಗೋಪಾಲ.

ಮಾರನೆ ದಿನ ಬೀರಬಲ್ಲ ದನ ಕಾಯುವ ಗೋಪಾಲನ ಕರ್ಕಂಡ್ ಅಕ್‌ಬರನ ಆಸ್ಥಾನಕ್ಕೆ ಬಂದದೆ. ಆಗ ಅಕಬರ್ ನನ್ನ ಪ್ರಶ್ನೆಗೆ ಉತ್ತರ ಹೇಳ್ತ ಬೀರಬಲ್ಲನ ಕೇಳ್ದ್. ಅದ್‌ಕೆ ಬೀರಬಲ್ಲ ಗೋಪಾಲನ ತೋರ್ಸಿ ನಿಮ್ಮ ಪ್ರಶ್ನೆಗೆ ಇಂವ ಉತ್ತರ ಹೇಳ್ದ್ ತೇಳ್ತ್ ರಾಜ ಪ್ರಶ್ನೆಗಳ್ನ ಕೇಳ್ತ್. ಆಗ ಗೋಪಾಲ ಹೇಳ್ದ್ ರಾಜ ನಿಮಿಗೆ ಭಾರತೀಯ ಸಂಸ್ಕೃತಿ ಲಾಯಿಕ ಗೊತ್ತುಟಲ್ಲಾ. ಅಥಿತಿಗಳನ್ನ ದೇವ್ರುತ ತಿಳ್ಕಂಡ್ ಸತ್ಕಾರ ಮಾಡ್ದು ನಿಮ್ಮ ಕರ್ತವ್ಯತ್ತೇಳ್ದ್. ಅಕ್‌ಬರ್ ಅಚ್ಚರಿಲಿ ಹೇಳ್ತ್. ಓ ಅಥಿತಿ ಹೇಳ್ ನೀನ್ ಕುಡಿಯಕೆ ಎಂಥ ಇಷ್ಟ ಪಟ್ಟಿಯಾತ. ಆಗ ಗೋಪಾಲ ನಂಗೆ ಹಾಲ್‌ಮಾತ್ರ ಇಷ್ಟ ಆದರ್ನೆ ಕೊಡಿತ ಹೇಳ್ದ್.

ರಾಜ ಹಾಲ್ ತರ್ಸಿ ಕೊಟ್ಟದೆ ಗೋಪಾಲ ಹಾಲ್‌ನ ಗ್ಲಾಸ್ ಕೈಲಿ ಹಿಡಕಂಡ್ ಅದರ್ನೇ ನೋಡ್ತಾ ನಿತ್ತ್ ಕಂಡಿದ್ದದೆ. ಆಗ ರಾಜ ಹಾಲ್‌ನ ಕುಡಿಯಕೆ ಹೇಳ್ದ್. ಆಗ ಗೋಪಾಲ ಹೇಳ್ದ್. ಹಾಲ್‌ಲಿ ಬೆಣ್ಣೆ ಇದ್ದದೆತ ಹೇಳ್ದ್. ಆದರೆ ಇಲ್ಲಿ ಬೆಣ್ಣೆನೆ ಕಾಂಬದುಲೆಲಾತ. ಆಗ ರಾಜ ಹೇಳ್ದ್ ಅರೆ ನೀನ್ ಮೂರ್ಖ ಅಲ್ಲಿ ಖಂಡಿತಾ ಬೆಣ್ಣೆ ಉಟ್ಟು ಆದರೆ ಕಾಂಬುದುಲೆತ ಆಗ ಗೋಪಾಲ ಹೇಳ್ದ್ ಮಹರಾಜ ಇದೇ ತರ ಈಶ್ವರ ಸನ ಎಲ್ಲಾ ಕಡೆ ಉಟ್ಟು ಹಾಲೊಳ್ಗೆ ಬೆಣ್ಣೆ ತರ ಆದರೆ ಕಣ್ಣಿಗೆ ಕಾಂಬದುಲೆತ ರಾಜ ನನ್ನ ಎರಡ್ ಪ್ರಶ್ನೆಗೆ ಉತ್ತರ ಸಿಕ್ಕಿತ್ ಇನ್ನೊಂದು ಪ್ರಶ್ನೆ ಬಾಕಿ ಉಟ್ಟು ಪ್ರಶ್ನೆಗಳ್ನ ಕೇಳ್ತಾ ಒಳ ಅಲ್ಲ. ರಾಜ ಹೇಳ್ತ್ ಹೌದು ನಾನ್ ನಿನ್ನ ಶಿಷ್ಯನೇತ.

ಆಗ ಗೋಪಾಲ ಹೇಳ್ದ್ ಏನ್ ನಿಮ್ಮ ರಾಜ್ಯಲಿ ಈತರ ವ್ಯವಹಾರ ಶಿಷ್ಯ ಸಿಂಹಾಸನಲಿ ಕುದ್ದ್‌ಕಂಡ್ ಗುರು ಕೆಳ್ಗೆ ನಿತ್ತ್‌ಕಂಡ್ ತಾ. ತಕ್ಷಣ ರಾಜ ಎದ್ದ್ ಗೋಪಾಲನ ಸಿಂಹಾಸನಲಿ ಕೂರ್ಸಿದೆ ಗೋಪಾಲ ಆಗ ಹೇಳ್ದ್, ಈಶ್ವರ ರಾಜನ ತರ ಪ್ರಜೆಗಳ್ನ ಪಾಲಿಸ್ತಾ ಉಟ್ಟುತ. ರಾಜ ಈಶ್ವರ' ಸ್ವರೂಪಂತ. ಈ ಉತ್ತರ ಕೇಳಿ ರಾಜ ಗೋಪಾಲನ ಒಳ್ಳೆ ಸತ್ಕಾರ ಮಾಡಿ ಕಳ್ಸಿದೆ.

-ಬಿಟ್ಟೀರ ಚೋಂದಮ್ಮ ಶಂಭು

# ಬಾಲ ಸಂಗಾತಿ ವಿಭಾಗ

*ಶಾಲೆಲಿ ಹೇಳಿ ಕೊಟ್ಟದೆಲ್ಲಾ ನಿಜ ಅಲ್ಲಾ*

ಮಕ್ಕಳೇ ನೀವು ಶಾಲೆಲಿ ಕಲ್ತದೆಲ್ಲಾ ನಿಜ. ಆದರೆ ಎಲ್ಲಾನೂ ಸತ್ಯ ಅಲ್ಲ, ಇಲ್ಲಿ ಕೆಲವು ಸತ್ಯ ಸಂಗತಿಗಳ್ನ ನಿಮ್ಮ ಮುಂದೆ ಮಡ್ಗಿನೆ.

ಪ್ರಾಚೀನ ಭಾರತದ ಇತಿಹಾಸನ ಕೆದ್‌ಕಿರೆಅಲ್ಲಿ ಮಾನವನ ಸಂಸ್ಕೃತಿಯ ವಿಕಾಸಕೆ ಆದ್ಯತೆ ಕೊಟ್ಟದನ್ನ ನಾವು ಕಾಂಬಕ್. ಮಾನವನ ಲೌಕಿಕ ಸುತ್ತು ಆಧ್ಯಾತ್ಮಿಕಪ್ರಗತಿಗಾಗಿ ನಮ್ಮ ಹಿಂದಿನವು ಬಹಳ ಶ್ರಮ ಪಟ್ಟೊಳೊ ಭಾರತಲಿ ಬೆಳ್ದಷ್ಟು ಚಿಂತನೆಗ ಬಹುಶಃಬೇರೆ ಯಾವ ದೇಶಲೂ ಕಾಂಬಕೆ ಸಿಕ್ಕುದುಲೆ. ಹಲವಾರ್ ದೇಶಗಳ್‌ಲಿಇನ್ನೂ ಸಂಸ್ಕೃತಿಯ ಬೀಜವೇ ಕಾಣದಿರ್‌ಕನ ಭಾರತಲಿ ಸಂಸ್ಕೃತಿತೇಳುವ ಹೆಮ್ಮರ ಬೆಳ್ದ್‌ಫಲಪುಷ್ಪ ಕೊಡ್‌ತಿತ್ತ್. ನಮ್ಮ ಸಂಸ್ಕೃತಿಯ ಅನುಸರಿಸಿಕಂಡ್ ಜನಾಂಗ ಸಾರ್ಥಕ ಜೀವನ ನಡ್ಸ್‌ತಿದ್ದೊ ಆದರೆ ದೌರ್ಭಾಗ್ಯದ ಮಾತ್‌ತೇಳ್ರಿ. ಅಂದಿನ ಉದಾತ್ತಚರಿತ್ರೆಯಿಂದ ಕೂಡ್‌ದಭರತ ವರ್ಷದ ಪರಿಚಯನಮಗಿಂದು ಸಿಕ್ಕಿತ್‌ಲೆ. ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಲಿ ನಡ್ದ ಸಾಧನೆದ್ ಕೆಲವುಅಂತಹ ಇಂದು ನಮಗೆ ಸಿಕ್ಕಿಟು ಆದರೂ,ವೈಜ್ಞಾನಿಕ ಕ್ಷೇತ್ರಲಿ ನಡ್ದ ನಮ್ಮ ಪೂರ್ವಕರ ಅದ್ಭುತ ಸಂಶೋಧನೆಗಳಲ್ಲಿ ನಮ್ಮಿಗೆ ಸಿಕ್ಕಿದ ಮಾಹಿತಿ ಕೇವಲ ಅತ್ಯಲ್ಪ. ಸಿಕ್ಕಿದ ಮಾಹಿತಿಗಳ ಬಗ್ಗೆಗೂ ಸರಿಯಾಗಿ ಪ್ರಚಾರ ಇಲ್ಲೆ ಆದ್ದರಿಂದ ಇನ್ನೂ ಅವು ಸಾಮಾನ್ಯ ಜನರ ದೃಷ್ಟಿಗೆ ಅಗೋಚರ ಆಗಿಯೇ ಉಟ್ಟು.

ಕ್ರಿ. ಶ. ಒಂದನೇ ಮತ್ತು ಎರಡನೇ ಶತಮಾನಲಿ ಭಾರತಲಿ ಭೌತಶಾಸ್ತ್ರ ರಾಸಾಯನಿಕ ಶಾಸ್ತ್ರ, ಖಗೋಲ ಶಾಸ್ತ್ರ, ಗಣಿತ ಹಾಗೂ ಸಸ್ಯಶಾಸ್ತ್ರ ಇತ್ಯಾದಿ ನಾನಾ ರೀತಿಲಿವಿಜ್ಞಾನ ಬೆಳೆದಿತ್ತ್. ಆದರೂ ವಿಜ್ಞಾನಾರಂಭವಾದುದೇ ಪಶ್ಚಿಮ ದೇಶಲಿಎಂಬ ಪಾಠನ ನಮ್ಮ ಮಕ್ಕಳಿಗೆ ನಾವೇ ಹೇಳಿಕೊಟ್ಟವೆ. ಇದೆಂತಹ ವಿಪರ್ಯಾಸ! ಇಂದಿನ ಭಾರತದ ಶಿಕ್ಷಣ ಪದ್ಧತಿಗೂ ವಿದೇಶೀ ಮೂಲನೇ ಆಗ್ಯುಟ್ಟು. ನಮ್ಮ ಜನ ನಮ್ಮವರ್ನ ನಂಬುದಕ್ಕಿಂತ ಹೆಚ್ಚಾಗಿ ವಿದೇಶೀ ಜನನೇನಂಬಿ ವಿಶ್ವಾಸ ತೋರ್ಸಿವೆ. ನಮ್ಮ ವಿಶ್ವ ವಿದ್ಯಾಲಯಗ ಸಹಿತ ಇದೇ ಸುಳ್ಳುವಬೋಧ್' ಮಾಡ್ತಾಳೊ.

*ಗಣಿತ*

ಭಾರತಲಿ ಗಣಿತ ಶಾಸ್ತ್ರದ ಆರಂಭ ಕಾಲನ ಕಾಣಕುತ್ತಾದರೆ ವೇದಗಳತ್ತ ದೃಷ್ಟಿ ಹರ್‌ಸೋಕು ವೇದಗಳಲ್ಲಿ ಹಾಗೂ ಆ ಕಾಲದ ಇತರ ಗ್ರಂಥಗಳಲ್ಲಿ ಗಣಿತದ ಬಗ್ಗೆ ಅನೇಕ ಉಲ್ಲೇಖನ ಕಾಂಬಕ್ಕೆ ಸಿಕ್ಕಿದೆ. ಸಮಗ್ರ ಪ್ರಪಂಚದ ಗಣಿತ ಶಾಸ್ತ್ರಜ್ಞರಪ್ರಕಾರ ಗಣಿತ ಶಾಸ್ತ್ರದ ಅನೇಕ ವಿಚಾರಗ ಆರಂಭ ಆದದ್ದೆ, ಭಾರತಲಿ ಆ ವಿಚಾರಗ ಇಂದ್ ಪ್ರಪಂಚದ ಎಲ್ಲಾ ಕಡೆಲಿ ವ್ಯಾಪಿಸಿಟ್ಟು ಅಂಕಗಣಿತ, ಬೀಜಗಣಿತ, ಭೂಮಿತ, ತ್ರಿಕೋಣಾಮಿತಿ. ಇತ್ಯಾದಿಗಿದ್‌ಕೆ ಉದಾಹರಣೆಗ ಗಣಿತದ ಹಲವುಪ್ರಕಾರಗ ಭಾರತಲಿ ಆರಂಭ ಆವುಟು.

ಇಂದ್ ದಶಮಲವಪದ್ಧತಿ ಲೋಕ ವ್ಯವಹಾರಲಿಉಟ್ಟು. ಈ ಪದ್ಧತಿಲಿ ಒಂದರಿಂದ ಒಂಭತ್ತರವರೆಗೆ ಅಂಕೆಗಳ್‌ನ್ನೂ ಶೂನ್ಯನೂಉಪಯೋಗಿಸುವೆ. ಸ್ಥಾನ ಪರಿವರ್ತನೆಂದ ಅಂಕೆಗಳ ಬೆಲೆನೂಬದಲಾದೆ ಈ ದಶಮಾನ ಪದ್ಧತಿ ಎರಡ್ ಸಾವಿರ ವರ್ಷಗಳಿಗೂ ಹಿಂದೆನೇ ಭಾರತಲಿಪ್ರಚಾರಲಿಇತ್ತ್. ಇದರ್ನ ಕೇಳ್‌ಕನ ಭಾರತೀಯರಾದ ನಮಿಗೆ ಎಷ್ಟ್ ಹೆಮ್ಮೆ ಅದೆ ಅಲ್ಲಾ ಮಕ್ಕಳೆ.

ಮುಂದಿನ ಸಂಚಿಕೆಲಿ ಇನ್ನಷ್ಟು ಹೊಸವಿಷಯಗಳ್ನ ತಿಳ್ಸಿನೆ. ಕಾಯಿತಾ ಇರಿ.

-ಸಂಗಾತಿ

ಅನ್ಯ ಸತಿಗಳ ಕಂಡು, ತನ್ನ ಹೆತ್ತವಳೆಂದು

# ಜೀವನ ಸಂಗಾತಿಗಳನ್ನು ಒಂದುಗೂಡಿಸುವ ಪುಣ್ಯದಕೆಲಸ "ಪುಣ್ಯ" ವಧು-ವರರ ಅನ್ವೇಷಣಾ ಸಂಸ್ಥೆ. ಸುಂಟಿಕೊಪ್ಪ



ತಂದೆ ತಾಯಿಯರಿಗೆ ಮಕ್ಕಳ ಶಿಕ್ಷಣ, ಉದ್ಯೋಗ, ಮಾತ್ರ ಸಮಸ್ಯೆಯಲ್ಲ, ಜತೆಗಾರರನ್ನು ಹುಡುಕಿ ಮದುವೆ ಮಾಡುವುದು ಕೂಡ ತಂದೆ ತಾಯಿಯರ ಒಂದು ದೊಡ್ಡ ಕರ್ತವ್ಯವಾಗಿರುತ್ತದೆ. ಮಕ್ಕಳು ಮದುವೆಯ ವಯಸ್ಸಿಗೆ ಬರುತ್ತಿದ್ದಂತೆ ತಂದೆ ತಾಯಿಯರಿಗೆ ಮದುವೆಯ ಚಿಂತೆ ಕಾಡತೊಡಗುತ್ತದೆ. ಒಳ್ಳೆಯ ಸಂಬಂಧಕ್ಕಾಗಿ ಶತ ಪ್ರಯತ್ನ ನಡೆಸುತ್ತಾರೆ. ಸರಿಯಾದ ಸಂಭಂಧಗಳು ಸಿಗದಿದ್ದಾಗ ಮನ ನೊಂದುಕೊಳ್ಳುತ್ತಾರೆ. ಆದ್ದರಿಂದ ಇಂತಹ ಒಂದು ಶುಭ ಕಾರ್ಯಕ್ಕೆ ಕೊಡಗಿನಲ್ಲಿ ಪ್ರಪ್ರಥಮವಾಗಿ ಒಂದು "ಪುಣ್ಯ" ಎಂಬ ವಧು-ವರರ ಅನ್ವೇಷಣಾ ಕೇಂದ್ರ ಪ್ರಾರಂಭವಾಗಿದೆ. ಈ ಸಂಸ್ಥೆಯು ಪ್ರಾರಂಭವಾಗಿ 1 ವರ್ಷ ಕಳೆದಿದೆ. ಈ ಸಮಯದಲ್ಲಿ ಅನೇಕ ಗೌಡ ಬಾಂಧವರು ಇದರ ಉಪಯೋಗವನ್ನು ಪಡೆದುಕೊಂಡಿದ್ದಾರೆ. ಈವರೆಗೆ 36 ಜನರಿಗೆ ಈ ಸಂಸ್ಥೆಯ ಮೂಲಕ ಕಂಕಣ ಬಲ ಕೂಡಿ ಬಂದಿದೆ.

ಗಂಡು ಹೆಣ್ಣುಗಳ ಭಾವಿ ಜೀವನಕ್ಕೆ ಭದ್ರ ಬುನಾದಿ ಒದಗಿಸುವ ವೈವಾಹಿಕ ಬಂಧನ ಜೋಡಿಸುವುದೆಂದರೆ ಅದೊಂದು ಗುರುತರ ಹೊಣೆಯೇ ಸರಿ. ಸಾಮಾನ್ಯವಾಗಿ ಗಂಡಸರೇ ನಡೆಸಿಕೊಂಡು ಬರುತ್ತಿರುವ ಇಂತಹ ಮಹತ್ವದ ಕಾರ್ಯವನ್ನು ಇಂದು ಒಂದು ಮಹಿಳೆಯಾಗಿ ಇವರು ನಿರ್ವಹಿಸುವ ಹೊಣೆ ಹೊತ್ತಿರುವುದೆಂದರೆ ಒಂದು ಹೆಮ್ಮೆಯ ವಿಷಯವೆ ಸರಿ. ಪ್ರತಿಯೊಬ್ಬ ವಧು-ವರರ ತಂದೆ ತಾಯಿಗಳ ಸಮಸ್ಯೆ ಅರಿತು, ಅವರಿಗೆ ಸಹಾಯಕವಾಗಿ ಗಂಡು -ಹೆಣ್ಣು ಹುಡುಕುವ ಕಾರ್ಯ ನಿರ್ವಹಿಸುತ್ತಿರುವ ಈ "ಪುಣ್ಯ" ಕೇಂದ್ರದ ಸ್ಥಾಪಕೆ ಶ್ರೀಮತಿ ಕಡ್ಯದ ರತಿ ಅರುಣ್‌ಕುಮಾರ್ ಇವರೊಂದಿಗೆ ನಮ್ಮಸಂಗಾತಿ ಭೇಟಿ ನೀಡಿದಾಗ ಕೆಲವೊಂದು ಪ್ರಶ್ನೆಗಳನ್ನು ಕೇಳಬೇಕು ಎಂದೆನಿಸಿತು.

***ಕೊಡಗು ಸಂಗಾತಿ:-ನಿಮ್ಮ ಪರಿಚಯ ನಮ್ಮ ಸಂಗಾತಿಗೆ ಸ್ವಲ್ಪ ತಿಳಿಸಬೇಕಾಗಿತ್ತು ?***

ನಾನು ಸುಂಟಿಕೊಪ್ಪದ ಶ್ರೀಮತಿ ಮತ್ತು ಶ್ರೀ ಯಂಕನ ಲೀಲಾಧರ ಮತ್ತು ಲಲಿತ ದಂಪತಿಯವರ ದ್ವಿತೀಯ ಪುತ್ರಿ. ಬಿ. ಕಾಂ., ಪದವೀಧರೆ. ನನ್ನನ್ನು ಬೆಟ್ಟತೂರಿನ ಕಡ್ಯದ ಅರುಣ್‌ಕುಮಾರ್ ಅವರಿಗೆ ವಿವಾಹ ಮಾಡಿಕೊಟ್ಟಿರುವರು. ನನ್ನಪತಿಯವರು ಬೆಂಗಳೂರಿನ ಬಿ. ಪಿ. ಎಲ್. ಕಂಪೆನಿಯಲ್ಲಿ ಕೆಲಸ ಮಾಡುತ್ತಿರುವರು. ನಮಗೆ ಪುಣ್ಯ ಎಂಬ ಮೂರು ವರ್ಷದ ಹೆಣ್ಣುಮಗಳಿರುವಳು. ನಾನು ವಿವಾಹವಾಗಿ ಐದು ವರ್ಷವಾಯಿತು. ಉದ್ಯೋಗದಲ್ಲಿಇಲ್ಲದ ಕಾರಣ ಬೆಂಗಳೂರಿನಲ್ಲಿ ಮನೆಯಲ್ಲಿಯೇ ಕುಳಿತು ಸಮಯ ಕಳೆಯುದು ಕಷ್ಟವಾಯಿತು. ಸಮಾಜದಲ್ಲಿ ಎಲ್ಲರಿಗೂ ಸಹಾಯವಾಗುವಂತಹ ಕೆಲಸ ಮಾಡಬೇಕು ಎಂದು ಮನಸ್ಸಿನಲ್ಲಿತ್ತು. ಅಲ್ಲದೆ ಇತ್ತೀಚೆಗೆ ನಮ್ಮ ಸಮಾಜದಲ್ಲಿ ಮದುವೆ ಎಂಬುದು ಒಂದು ದೊಡ್ಡ ಸಮಸ್ಯೆಯಾಗಿದೆ. ಹತ್ತು ಜನರಿಗೆ ಉಪಕಾರವಾಗುವಂತಹ ಉದ್ಯೋಗವೆಂದು ಇದನ್ನೇ ಆರಿಸಿಕೊಂಡೆನು. ಇದಕ್ಕೆ ನನ್ನ ತವರು ಮನೆಯಿಂದಲೂ ಅತ್ತೆ ಮನೆಯಿಂದಲೂ ಪ್ರೋತ್ಸಾಹ ಸಿಕ್ಕಿತು. ಮುಖ್ಯವಾಗಿ ನನ್ನ ಪತಿಯವರೂ ಎಲ್ಲಾ ರೀತಿಯಲ್ಲೂ ಸಹಾಯ ಮಾಡಿ ಕೈ ಜೋಡಿಸಿದರು. ನಮ್ಮ ಈ ಕಾರ್ಯಕ್ಕೆ ಪ್ರತಿಯೊಬ್ಬರಿಂದಲೂ ಉತ್ತಮ ರೀತಿಯ ಪ್ರತಿಕ್ರಿಯೆ ದೊರಕಿ ಈ ಕಾರ್ಯಚಟುವಟಿಕೆ ಖಂಡಿತಾ ಫಲಕಾರಿಯಾಗುತ್ತದೆ ಹಾಗೂ ಒಳ್ಳೆಯ ಯಶಸ್ಸು ದೊರಕುತ್ತದೆ ಎಂದು ನನ್ನನ್ನು ಹುರಿದುಂಬಿಸಿದರು. ನನಗೂ ಇಂತಹ ಕೆಲಸವನ್ನು ಒಳ್ಳೆ ರೀತಿಯಲ್ಲಿ ನಿಷ್ಟೆಯಿಂದ ಪ್ರಮಾಣಿಕವಾಗಿ ಮಾಡಬೇಕೆಂಬ ಛಲ ಹುಟ್ಟಿದೆ. ಆದರೆ ಇಲ್ಲಿ ಬರುವ ಪ್ರತಿಯೊಬ್ಬರಿಗೂ ಜೋಡಿ ಮಾಡಲು ಅಸಾಧ್ಯ. ಪ್ರಯತ್ನವಷ್ಟೇ ನನ್ನದು, ಫಲ ಆ ವೆಂಕಟರಮಣ ದೇವರದ್ದು.

***ಕೊಡಗು ಸಂಗಾತಿ:-"ಪುಣ್ಯ" ಸಂಸ್ಥೆ ಕೈಗೊಂಡಿರುವ ಕಾರ್ಯವೈಖರಿಯ ಬಗ್ಗೆ ಮಾಹಿತಿ ನೀಡಬಲ್ಲಿರಾ?***

ನಮ್ಮಲ್ಲಿಗೆ ಬಂದವರ ಬಳಿ ಹುಡುಗ-ಹುಡುಗಿಯರ ಭಾವಚಿತ್ರ ಮತ್ತು ಅವರ ವಿವರಗಳನ್ನು ಹಾಗೂ ಅವರ ಮುಂದಿನ ಬೇಡಿಕೆಗಳನ್ನು ಪಡೆದುಕೊಳ್ಳುತ್ತೇನೆ. ಅವರ ಬೇಡಿಕೆಗೆ ಸರಿಯಾದ ವಧು-ವರರ ಬಯೋಡೇಟಾವನ್ನುಅವರ ಮುಂದಿಡುತ್ತೇನೆ. ಈ ಮೊದಲ ಪ್ರಯತ್ನ ಸರಿಯಾದರೆ ಅವರಿಬ್ಬರ ಅನುಕೂಲ ನೋಡಿಕೊಂಡು ನಮ್ಮ ಆಫೀಸಿನಲ್ಲಿಯೇ ಸಂದರ್ಶನ ಮಾಡಿಸುತ್ತೇವೆ. ಪರಸ್ಪರ ಒಪ್ಪಿಗೆಯಾದ ನಂತರ ಮದುವೆ ಮಾತುಕತೆ, ಖರ್ಚು ವೆಚ್ಚದ ಬಗ್ಗೆ ಅವರಿಗೆ ಸಂಬಂಧಿಸಿರುತ್ತದೆ.

ನಾವು ಈವರೆಗೆ ಯಾವ ಸುಳ್ಳು, ಮೋಸ, ವಂಚನೆ, ಮಾಡಿ ಯಾವ ಮದುವೆಯೂ ಮಾಡಿಸಿಲ್ಲ. ಮುಂದೆಯು ಮಾಡಿಸುವುದಿಲ್ಲ.

---

ಅರಸ ರಕ್ಕಸನಂತೆ, ವರಮಂತ್ರಿ ಹುಲಿಯಂತೆ, ಪ್ರಜೆಗಳು ನಾಯಿಯಂತೆ

ವಧು-ವರರ ಬಯೋಡೆಟಾದ ಆಧಾರದ ಮೇಲೇಯೇ, ನಾವು ಸಂಬಂಧವನ್ನು ತೋರಿಸುತ್ತೇವೆ. ಬಹುತೇಕ ವ್ಯವಹಾರವನ್ನು ದೂರವಾಣಿ ಹಾಗೂ ಪತ್ರ ಮುಖೇನ ನಡೆಸುತ್ತೇವೆ.

ಕೊಡಗು ಸಂಗಾತಿ:- ಅನೇಕ ವಿವಾಹಗಳನ್ನು ಮಾಡಿರುವ ಹೆಗ್ಗಳಿಕೆಗೆ ಪಾತ್ರರಾಗಿರುವ ಇವರು ಅವರಿಗೆ ಕೊಟ್ಟಷ್ಟೇ ಪ್ರಾಶಸ್ತ್ಯವನ್ನು ಅಂಗವಿಕಲರಿಗೆ, ವಿಧವೆಯರಿಗೆ ಹಾಗೂ ವಿಚ್ಛೇದಿತರಿಗೆ, ಕೊಡುತ್ತಾರೆ. ತಮ್ಮ ಈ ವಿಶಿಷ್ಟ ಪೂರ್ಣ ಸೇವೆಯನ್ನು ಅತ್ಯಂತ ಎಚ್ಚರಿಕೆಯಿಂದಲೂ ಮುತುವರ್ಜಿಯಿಂದಲೂ ನಡೆಸಿಕೊಂಡು ಬರುತ್ತಿರುವ ರತಿಯವರ ಉತ್ಸಾಹ ಮೆಚ್ಚುವಂತಹದ್ದು. ಇವರ ಈ ಪುಣ್ಯದ ಕೆಲಸ ಇನ್ನು ಹೆಚ್ಚಿನ ಯಶಸ್ಸು ಸಾಧಿಸಿ ಒಳ್ಳೆಯ ಕೀರ್ತಿ ಗಳಿಸಲು ಮುಂದಾಗಲಿ ಎಂದು ಸಂಗಾತಿ ಶುಭ ಹಾರೈಸುತ್ತದೆ.

ಸಂದರ್ಶನ ಬವರಣೆಗೆ -ಪಟ್ಟಡ ಪ್ರಭಾಕರ.

ವಿಳಾಸ:- ಶ್ರೀಮತಿ ರತಿ ಅರುಣ್‌ಕುಮಾರ್,
"ಪುಣ್ಯ" ವಧು-ವರರ ಅನ್ವೇಷಣಾ ಕೇಂದ್ರ,
ಎನ್. ಸಿ. ಜಿ. ಕಾಂಪ್ಲೆಕ್ಸ್ ಬಿ. ಎಂ. ರಸ್ತೆ,
ಸುಂಟಿಕೊಪ್ಪ ಕೊಡಗು - 571 237

**ದೂರವಾಣಿ:08276 ಮನೆ:6225208276 ಕಛೇರಿ: 62083**

## ನಿಧನ

ವಿರಾಜಪೇಟೆ ತಾಲೂಕು ನರಿಯಂದಡ ಗ್ರಾಮದ ಮಂಞ್ಞಾಪುರ ತಿಮ್ಮಯ್ಯನವರು ದಿನಾಂಕ 28-4-2002 ರಲ್ಲಿ ತಮ್ಮ ಸ್ವಗೃಹದಲ್ಲಿ ನಿಧನರಾದರು. ದಿವಂಗತರು ಪತ್ನಿ,ಮತ್ತು ಮಕ್ಕಳು, ಮೊಮ್ಮಕ್ಕಳನ್ನು ಅಲ್ಲದೆ ಅಪಾರಬಂಧುವರ್ಗವನ್ನು ಅಗಲಿದ್ದಾರೆ.

ವರದಿ: ಮಂಞ್ಞಾಪುರ ಧರಣಿ, ಮೈಸೂರು

## ಅರೆಗನ್ನಡಲಿ ಕ್ರಿಕೆಟ್ ಆಟ

1)ರನ್ನ್ ಅವುಟ್: ಸ್ಕೂಲಿಗೆ ಹೋಕುತಾ ಬಸ್ಸಿಗೆ ಓಡಿ ಬಾಕನ ಬಸ್ಸ್ ದಾಟಿ ಬುಡ್ಡು.

2)ಕೀಪರ್ ಕ್ಯಾಚ್ ಅವುಟ್: ಪರೀಕ್ಷೆ ರೂಂಲಿ ಕಾಪಿ ಮಾಡ್ಕನ ಮ್ಯಾಡಂ ಕೈಗೆ ಸಿಕ್ಕಿಬೀಳ್ದು.

3)ಹಿಟ್ ವಿಕೆಟ್: ಪೆನ್ನ್ ಬರ್ಯದೆ ಪರೀಕ್ಷೆ ಲಾಯ್ಕ ಮಾಡದೆ ಫೇಲಾದು.

4)ಫಾಲೋ ಆನ್: ಮಾರ್ಚಿಲಿ ಫೇಲಾಗಿ ಪುನಃಹ ಅಕ್ಟೋಬರ್‌ಲಿ ಪರೀಕ್ಷೆ ಗೆ ಕೂರ್ದು.

5)ಇನ್ನಿಂಗ್ಸ್ ಡಿಫೀಟ್: ಅಕ್ಟೋಬರ್ ಪರೀಕ್ಷೆ ಕಷ್ಟ ಆಗಿ ಪುನಃ ಫೇಲ್ ಆದು.

6)ಕ್ಲೀನ್ ಬೋಲ್ಡ್: ಇದೆಲ್ಲಾ ನಡ್ದ್ ಜೀವನಲಿ ಎಲ್ಲಾ ವಿಷಯಲಿ ಫೇಲಾದು

-ರ್‍ಯಾಲಿ ಗಣಪತಿ, ಮರಂದೊಡ.

# ಕಾವೇರಿ ಉತ್ಸವದಲ್ಲಿ ಜರುಗಿದ ಕವಿಗೋಷ್ಠಿ



ಮಂಡ್ಯ - ಕೊಡಗು ಸಾಂಸ್ಕೃತಿಕ ಸಮಿತಿ ಆಶ್ರಯದಲ್ಲಿ 24-5-2002 ಮಧ್ಯಾಹ್ನ ಕವಿಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಗೋಷ್ಠಿಯ ಅಧ್ಯಕ್ಷತೆಯನ್ನು ನಿವೃತ್ತ ಪ್ರಾಧ್ಯಾಪಕ ಡಾ. ರಾಮೇಗೌಡ ಅವರು ವಹಿಸಿ ಮಾತನಾಡುತ್ತಾ, ರಚನಾತ್ಮಕ ಪ್ರಕ್ರಿಯೆಯಲ್ಲಿ ಕಾವ್ಯಗಳು ಕವಿಗಳ ಮೂಲಕ ಹುಟ್ಟಿ ಕೊಳ್ಳುವುದರೊಂದಿಗೆ ಅಂತಹ ಕಾವ್ಯಗಳು ಸಮಾಜವನ್ನು ಕಟ್ಟುವ ಕೆಲಸ ಮಾಡಬೇಕೇ ಹೊರತು ಒಡೆಯುವ ಕೆಲಸ ಮಾಡಬಾರದೆಂದು ವ್ಯಾಖ್ಯಾನಿಸಿದರು. ಕೊಡಗು ಮತ್ತು ಮಂಡ್ಯದ ನಡುವೆ ಹಾಸು ಹೊಕ್ಕಾಗಿರುವ ಸಂಸ್ಕೃತಿ, ಕಲೆ, ವಿಚಾರ, ಮಂಥನಗಳನ್ನು ಇಂತಹ ಕವಿಗೋಷ್ಠಿಗಳ ಮೂಲಕ ಆಗಿಂದಾಗ್ಗೆ ಮೆಲುಕು ಹಾಕುವಂತಾಗಬೇಕೆಂದು ಅವರು ಆಶಿಸಿದರು. ಗೋಷ್ಠಿಯಲ್ಲಿ ಕೊಡಗಿನ ಉದಯೋನ್ಮುಖ ಕವಿಗಳಾದ ಬಾರಿಯಂಡ ಜೋಯಪ್ಪ, ಜೆ. ಸೋಮಣ್ಣ, ಶ.ಗ. ನಯನ ತಾರಾ, ಬಿ. ಎನ್. ರವಿ. ಮೂರ್ನಾಡು, ಅವರುಗಳು ಪಾಲ್ಗೊಂಡು ತಮ್ಮದೇ ಶೈಲಿಯಲ್ಲಿ ನಾಡು ನುಡಿಗೆ ಒತ್ತು ನೀಡುವಂತಹ ಕವಿತೆಗಳನ್ನು ರಚಿಸಿ ವಾಚಿಸುವ ಮೂಲಕ ಪ್ರೇಕ್ಷಕರ ಗಮನ ಸೆಳೆದರು. ಮಂಡ್ಯದ ಪರವಾಗಿ ಶಿವಳ್ಳಿ ಕೆಂಪೇಗೌಡ, ಮಾ, ರಾಮಕೃಷ್ಣ ಮೂಲತಃ ಕೊಡಗಿನವರಾದ ಡಾ. ಪದ್ಮಶೇಖರ್, ಪ್ರೊ. ಕೃಷ್ಣೇಗೌಡ, ಬಲ್ಲೇನಹಳ್ಳಿ ಮಂಜುನಾಥ್, ಕೆ. ಪಿ. ವಸುಂದರಾ, ಅರ್ನಾಕಲಿ ಸಲೀಂ ಮೊದಲಾದವರು ಕವನ ವಾಚಿಸಿದರು.

ಉಭಯ ನಾಡಿನ ಕವಿಗಳು ಕೊಡಗು-ಮಂಡ್ಯ ಜನತೆಯ ನಡುವಿನ ಸಂಬಂಧ ಮತ್ತು ಕಾವೇರಿ ಮಹಿಮೆಯನ್ನು ಒಳಗೊಂಡ ಕವನಗಳನ್ನು ವಾಚಿಸುವ ಮೂಲಕ ಪ್ರೌಢಿಮೆ ಮೆರೆದರು.

-ಸಂಗಾತಿ

# ಗೌಡರ ಸ್ಮರಣೆ

ಗೌಡರ ಇತಿಹಾಸ ಹೇಳುವುದು ವಿಜಯನಗರದ ಹಂಪಿಯಲಿ
ಇರುವುದು ಅಲ್ಲಿ 12 ಕಂಬಗಳ ಕಲ್ಲಿನ ಚಪ್ಪರ ಅದು ನಮಗರಿಯದು ಇಂದು।
ನಾಶವಾಯ್ತು ಅಂದು 1565ರ ತಾಳೀ ಕೋಟೆಯ ಕದನದಲಿ
ಪೂರ್ವಜರು ಹತರಾದರು ಸರ್ವಸ್ವವನ್ನು ಕಳೆದುಕೊಂಡರಂದು॥

ಅಳಿದುಳಿದ ಗೌಡಹಿರಿಯರು ಬಂದರು ದಕ್ಷಿಣ ಪಥವಾಗಿ
ಆಶ್ರಯಿಸಿ ಮೊರೆಯಿತ್ತರು ಋಷಿಶಂಗೆ ಶೃಂಗೇರಿಯಲಿ।
ಗುರು ಜಗದ್ಗುರುಗಳು ಆಶೀರ್ವದಿಸಿ ವೆಂಕಟರಮಣನ ನೆನೆಯುತ್ತಾ,
ನೆನೆಯುತ್ತಾ ಕಳುಹಿಸಿಕೊಟ್ಟರು ಆಶ್ರಿತರಾಜ ಇಕ್ಕೇರಿಗೆ॥

ಇಕ್ಕೇರಿ ದೊರೆ ಸ್ವಾಗತಿಸಿ ಕಳುಹಿಸಿದ ಐಗೂರು ಸೀಮೆಗೆ
ಗೌಡಜನಾಂಗ ನಲಿಯುತ ಕುಣಿಯುತ' ಬಂದಿತು ಜೋಗಿಯೊಂದಿಗೆ।
ಜನರಿಗೆ ಕಂಡಿತು ಪುಷ್ಪಗಿರಿಯು ಕವಲೊಡೆಯಿತು ಅಲ್ಲಿ ಭಿನ್ನವಿಲ್ಲದೆ
ಧಾವಿಸಿತ್ತೊಂದು ಕವಲು ಕನ್ನಡ ಜಿಲ್ಲೆಗೆ ಮಗದೊಂದು ಕ್ರೋಡದೇಶದೆಡೆಗೆ॥

ವರ್ಷಗಳುರುಳಿತ್ತು, ಶತಮಾನ ಕಳೆಯಿತು ಮುಂದೊಮ್ಮೆ ಸೇರಿದರು 1985ರಲ್ಲಿ
ಹತ್ತುಕುಟುಂಬ ಹದಿನೆಂಟು ಗೋತ್ರ ಸರ್ವಬಾಂಧವರು ನೆನೆಯಿತು ಹಿಂದಿನದನ್ನು।
ಉಳಿಸಿತು ನಿಧಿಯನ್ನು ಮುಂದಿನ ಯುವ ಪೀಳಿಗೆಯಾಭಿವೃದ್ಧಿಗಾಗಿ
ವಹಿಸಿತು ಆ ನಿಧಿಯನ್ನು ಕೊಡಗು ದಕ್ಷಿಣ ಕನ್ನಡ ಅಭಿವೃದ್ಧಿ ಸಮಿತಿಗೆ॥

ಖುಷಿಯಲಿ ಮೆರೆದಾಡಿತು ಯುವ ಜನಾಂಗ ಎರಡು ಜಿಲ್ಲೆಗಳಿಂದ
ಕಳೆಯಿತು ವರ್ಷಗಳು ಹತ್ತಾರು, ಮೆರೆಯಿತು ಈರ್ಷೆಯು ಜನರಲಿ।
ನೆನೆಗುದಿಗೆ ಬಿದ್ದಿತು ಸರ್ವಾಂಗೀಣ ಅಭಿವೃದ್ಧಿಯು, ಕವಿಯಿತು ಮಂಕುಬುದ್ಧಿಯು
ಇದನ್ನರಿತು ಬಂದಳು ಸಂಗಾತಿ ಜನರಿಗೆ ತಿಳಿಯ ಪಡಿಸಲು ಸಂತೋಷದಿಂ॥

ನಗುನಗುತ ಬಂದಳು ಕೊಡಗು ಸಂಗಾತಿ
1997ರಲ್ಲಿ ಜನಿಸಿದಳು ಮೈಸೂರು ನಗರದಲಿ।
ಬಂದು ಹರಸಿದ ಹಿರಿಯರು ಇಂದು ಕಾಲ ಕಂಡರು
ಎಷ್ಟೇ ಕಷ್ಟ ಬಂದರು ನಿಲ್ಲಸದಿರೆಂಬ ಆಶೀರ್ವಾದ॥

ಛಲ ತೊಟ್ಟು ಮುಂದುವರಿಯಿತು ಕೊಡಗು ಸಂಗಾತಿ
ನಲಿದಾಡಿತು ಜೀವಾವಧಿ ಸದಸ್ಯರ ಕ್ಷಮದಲಿ।
ಹಿತೈಷಿ ಸದ್ಗುಣ ಬಳಗದವರ ನೆರಳಲಿ।
ಚಂದದಾರ ಜಾಹಿರಾತು ಓದುಗರ ಮಡಿಲಲ್ಲಿ॥

ಪತ್ರಿಕೆ ಬೇಕಿತ್ತು ಜನಾಂಗದ ಅಭಿವೃದ್ಧಿಗೆ।
ಪತ್ರಿಕೆ ಬಂದಿತ್ತು ಹಿರಿಯರ ಮನದಂತೆ
ನೆನೆಯಿತು ಪತ್ರಿಕೆ ಕಾಲಕಂಡ ಸರ್ವರನು
ಕೊಡಗು ಸಂಗಾತಿ ಗೆದ್ದಿತು ಸರ್ವರ ಮನದಾಳವನು॥

ಆಯಿತು ಸಾಕಷ್ಟು ಚಂದದಾರರು ಹಿತೈಷಿಗಳು
ಬೆಳೆಯಿತು ಕೊಡಗು ಸಂಗಾತಿ ಬಳಗವು ಮಿಗಿಲಾಗಿ।
ನಿಂದಿಸಿತು ಜನರ, ಸಂಘ ಸಂಸ್ಥೆಗಳ ನ್ಯೂನತೆಗಳನ್ನು
ತಂದಿತು ನನಗರಿಯದೆ ಈರ್ಷ್ಯೆಯನು ತಲೆ ಮೇಲೆ॥

ಹತ್ತು ಜನರ ಈರ್ಷ್ಯೆಯು ಕಾರಣವಾಯ್ತು ಮಾರಕ
ಹಿತೈಷಿಗಳಾದವರು ಹಿತಶತ್ರುಗಳಾದರು ಸಂಗಾತಿಗೆ।
ಹಾಕಿದರು ಮಾನನಷ್ಟವೆಂಬ ಮೊಕದ್ದಮೆಯ
ಕಟ್ಟಿದರು ಇಲ್ಲ ಸಲ್ಲದ ಆರೋಪವ ಸಂಗಾತಿಗೆ॥

ಸಂಗಾತಿ ಹೆದರಲಿಲ್ಲ ಜಗ್ಗಲಿಲ್ಲ ನಡೆಯಿತು ತಾ ಮುಂದೆ
1997 ರಿಂದ ಇಂದಿನ ತನಕ ಜಾಣ್ಮೆಯಲಿ।
ಆಯಿತು ನಷ್ಟದ ಮೇಲೆ ನಷ್ಟ, ಕಷ್ಟದ ಮೇಲೆ ಕಷ್ಟ
ಕಡೆಗೂ ತತ್ತರಿಸಿತು ಹಿತ ಶತ್ರುಗಳ ದಾಳಿಗೆ ಐದು
ವರ್ಷದ ಎಳೆಕಂದಾ॥

ಕುಸಿಯಿತು ಇಂದು ಹಿತಶತ್ರುಗಳ ದುಷ್ಟ ಪ್ರವೃತ್ತಿಗೆ
ಸಂಘ ಸಂಸ್ಥೆ ಸಮಾಜಗಳು ಬರಲಿಲ್ಲ ಸಂಗಾತಿ ನೆರವಿಗೆ।
ಬೇಡವಾಯ್ತು ಸ್ವಾರ್ಥ ರಾಜಕಾರಣಿ ದುಷ್ಟವರ್ಗಕೆ
ಜನಾಂಗಕೆ ಬೇಡವಾಯ್ತು ಅರೆಗನ್ನಡ ಸಂಸ್ಕೃತಿ
ಸಂಪ್ರದಾಯಗಳು॥

ತನಗರಿವಿಲ್ಲದೆ ವಾಲಿತು ಜನಾಂಗ ಒಕ್ಕಲಿಗರೊಂದಿಗೆ
ಸಹಕರಿಸಿದರು ಶ್ರೀಮಂತ ದುಷ್ಟ ಶಕುನಿ ವರ್ಗದವರು।
ಗೌಡರೆಂದೂ ಒಕ್ಕಲಿ ಗೌಡರಲ್ಲ ಒಕ್ಕಲಿಗ ಗೌಡರೆಂದೂ ಗೌಡರಲ್ಲ
ಗೌಡರಿಗಿರುವುದವರದೆ ಆದ ಪ್ರಾಚೀನ ನಶಿಸುತ್ತಿರುವ ಸಂಸ್ಕೃತಿ
ಸಂಪ್ರದಾಯಗಳು॥

ಹತ್ತು ಕುಟುಂಬ ಹದಿನೆಂಟು ಗೋತ್ರದ ಯುವ ಪೀಳಿಗೆಯೇ
ಬನ್ನಿ ಮುಂದೆ ಎದೆತಟ್ಟಿ ನಾವೆಂದೆಂದೂ ಗೌಡರೆಂದು।
ಉಳಿಸಿ ಮೆರೆಯುವ ಕಾಲ ಕಂಡ ನಮ್ಮ ಪೂರ್ವಜರಿಗಾಗಿ
ಲಭಿಸುವುದು ನಮಗಂದು ವೆಂಕಟರಮಣ ಶಾರದಾಂಬೆಯರ
ಕಟಾಕ್ಷವು॥

-ಪಟ್ಟಡ ಪ್ರಭಾಕರ

ಸಂಗಾತಿಯನ್ನು ಒಲೆಗೊಂದರಂತೆ
ಸದಸ್ಯರಾಗಿ ಕೊಂಡು ಓದಿ.

# ಒಕ್ಕಲಿಗರು: ಪ್ರೊ|| ಪೂಜಾರಿ ಮೊಣ್ಣಪ್ಪ.

ಗೌಡರಲ್ಲಿ ಹಲವಾರು ಜನರು ಗೌಡ ಒಕ್ಕಲಿಗ ಸಂಬಂಧ ಹೇಗೆ-ಏನು- ಈ ವಿಷಯದಲ್ಲಿ ನಮ್ಮ ನಿಲುವೇನು? ಎಂಬುದಾಗಿ ಪ್ರಶ್ನಿಸಿದ್ದಾರೆ. ಕೆಲವರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರಿಗೆ ಹಳೇ ಮೈಸೂರಿನ ಒಕ್ಕಲಿಗರೊಡನೆ ರಕ್ತ ಸಂಬಂಧ ಇದೆ ಎಂದು ವಾದಿಸುವರು. ಇನ್ನು ಕೆಲವರು ಗೌಡರು ಒಕ್ಕಲಿಗರಲ್ಲ ಎಂದು ವಾದಿಸುವರು. ಈ ರೀತಿಯ ವಾದದಿಂದ ಸಾಮಾನ್ಯ ಜನರು ಹಾಗಾದರೆ ಗೌಡರಿಗೂ ಒಕ್ಕಲಿಗರಿಗೂ ಸಂಬಂಧ ಇಲ್ಲವೇ? ಎಂಬ ಪ್ರಶ್ನೆಯನ್ನು ಹಾಕುತ್ತಾರೆ. ಈ ಪ್ರಶ್ನೆಗಳಿಗೆ ಉತ್ತರವನ್ನು ನನ್ನ ಕೈಲಾದ ಮಟ್ಟಿಗೆ ಉತ್ತರಿಸಲು ಪ್ರಯತ್ನ ಪಡುತ್ತಿದ್ದೇನೆ. ಅದಕ್ಕಾಗಿ ಮೊದಲು ಒಕ್ಕಲಿಗರೆಂದು ಕರೆಯುತ್ತಿರುವ ಜನಾಂಗದ ಪಂಗಡಗಳ, ಮೂಲ ಅವರು ಸಾಮಾನ್ಯವಾಗಿ ವಾಸವಾಗಿರುವ ಪ್ರದೇಶ ಅವರ ಮಾತೃಭಾಷೆ, ಅವರಲ್ಲಿರುವ ಉಪ ಪಂಗಡಗಳು, ಮದುವೆಯಲ್ಲಿ ನಡೆಯುವ ಪದ್ಧತಿಗಳು, ಗೋತ್ರ ಮುಂತಾದ ವುಗಳ ವಿವರವನ್ನು ಕೊಟ್ಟು ನಂತರ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರ ಪರಿಚಯವನ್ನು ಕೊಟ್ಟಿರುತ್ತೇನೆ. ಈ ಲೇಖನವನ್ನು ಯಾವುದೇ ರೀತಿಯ ಭೇದ ಭಾವವನ್ನು ತೋರಿಸುವುದಕ್ಕಾಗಿ ಬರೆದಿಲ್ಲ. ಭಾರತ ಸಂವಿಧಾನದಲ್ಲಿ ಹಿಂದುಳಿದ ಪಂಗಡದ ಜಾತಿ ಮೀಸಲಾತಿ ವ್ಯವಸ್ಥೆ ಇರುವವರೆಗೆ ತಾನು ಹುಟ್ಟಿದ ಜಾತಿಯ ಹೆಸರೇನು ಎಂದು ತಿಳಿದುಕೊಳ್ಳುವುದು ಅತಿ ಅವಶ್ಯಕ.

ಸ್ನೇಹಚಾರಕ್ಕಾಗಿ ರಾಜಕೀಯ ಲಾಭಕ್ಕಾಗಿ ಅಥವಾ ವಿವಾಹ ಸಂಬಂಧಕ್ಕೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗೌಡರೂ ಒಕ್ಕಲಿಗರೂ ಒಂದೇ ಜಾತಿಯವರೆಂದರೆ ಸಾಮಾನ್ಯ ಜನರಲ್ಲಿ ನಾವು ಗೌಡರೆಂದು ಹೇಳಿಕೊಳ್ಳಬೇಕೇ ಅಥವಾ ಒಕ್ಕಲಿಗರೆಂದು ಹೇಳಿಕೊಳ್ಳಬೇಕೆ? ಎಂಬ ಸಂಶಯ ಉಂಟಾಗುವುದು.

ರಾಜಕೀಯ ಸ್ನೇಹಚಾರ ಹಾಗೂ ವಿವಾಹ ಸಂಬಂಧ ಯಾವುದೇ ರೀತಿಯಲ್ಲಿ ಇದ್ದರೂ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮೀಸಲಾತಿ ಪಟ್ಟಿಯಲ್ಲಿ ಗೌಡರೆಂದು ಈ ಎರಡು ಜಿಲ್ಲೆಯ ಗೌಡರನ್ನು ನಮೂದಿಸಿರುವಾಗ ಇವರ ಜಾತಿಯ ಹೆಸರನ್ನು ಕೊಡಗು ಗೌಡ, ಸುಳ್ಯದ ಗೌಡ, ಪುತ್ತೂರು ಗೌಡರೆಂದು ಕರೆಯದೆ, "ಗೌಡ" ಎಂಬುದಾಗಿ ನಮೂದಿಸಿದರೆ ಮಾತ್ರ ಅದು ಸರಿಯಾದ ಜಾತಿಯ ಹೆಸರು ಆಗುತ್ತದೆ. ಇದನ್ನೇ ನಾವುಗಳು ರಾಜ್ಯದ ಹಾಗೂ ರಾಷ್ಟ್ರೀಯ ಹಿಂದುಳಿದ ಪಂಗಡಗಳ ಕಮಿಷನ್ ಮುಂದೆ ನಿವೇದಿಸಲಾಗಿದೆ. ಒಕ್ಕಲಿಗರೂ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗೌಡರಿಗೆ ರಕ್ತ ಸಂಬಂಧ ಇದೆಯೇ ಈ ಗೌಡರೂ ಒಕ್ಕಲಿಗರೇ? ಎಂಬ ಪ್ರಶ್ನೆಯನ್ನು ಮಾನ್ಯ ವೆಂಕಟ ಸ್ವಾಮಿ ಕಮಿಷನ್‌ನಿಂದ ಹಿಡಿದು ಮೊನ್ನೆಯವರೆಗಿನ ಕಮಿಷನ್‌ಗಳು ಇದೇ ಪ್ರಶ್ನೆಯನ್ನು ಹಾಕಿದ್ದಾರೆ. ಈ ರೀತಿ ಪ್ರಶ್ನೆ ಹಾಕಿದಾಗ ಅಲ್ಲವೆಂದೇ ಹೇಳಬೇಕೇ ಹೊರತು ಹೌದು ಎಂದು ಉತ್ತರ ಕೊಟ್ಟರು. ಯಾವ ಒಕ್ಕಲಿಗರು? ಗಂಗಡಿಕಾರರೇ? ಕುಂಚಟಿಗರೇ? ಮರಸ್ಸು ಒಕ್ಕಲಿಗರೇ? ಅಥವಾ ಹಳ್ಳಿಕಾರ ಒಕ್ಕಲಿಗರೇ ಎಂಬ ಪ್ರಶ್ನೆ ಉದ್ಭವಿಸಿ ಇದಕ್ಕೆ ಉತ್ತರವೇ ಇಲ್ಲದಾಗಿ ಈ ಗೌಡರಿಗೆ ಹಿಂದುಳಿದ ಪಂಗಡ ಜಾತಿಗಳಲ್ಲಿಯೂ ಪಂಗಡದ ಪಟ್ಟಿಯಲ್ಲಿ ಸೇರಿಸಲಿಕ್ಕೆ ಆಗದೆ ಆ ಪಟ್ಟಿಯಿಂದ ಹೊರಗೆ ಉಳಿಯುವ ಸಂದರ್ಭ ಬಂದಿದೆ. ಒಕ್ಕಲಿಗರ ಸಂಬಂಧ ಬರೆ ವಿವಾಹದ, ರಾಜಕೀಯ ಹಾಗೂ ಸ್ನೇಹ ಚಾರದ ಸಂಬಂದ ಹೊರತು, ಜಾತಿ ಜಾತಿಯ ಸಂಬಂಧವೆಂದು ಈಗ ಸಧ್ಯದ ಪರಿಸ್ಥಿತಿಯಲ್ಲಿ ಹೇಳಲು ಸಾಧ್ಯವಿಲ್ಲ. ಗೌಡ ಎಂಬ ಜಾತಿ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆ ಕೇರಳದ ಕಾಸಗೋಡು ಹಾಗೂ ಈಗ್ಯೆ 50-60 ವರ್ಷಗಳಿಂದ ಕೊಡಗಿನಿಂದ ವಲಸೆಹೋಗಿ ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ಮತ್ತು ಹುಣಸೂರು ತಾಲ್ಲೂಕುಗಳಲ್ಲಿಯೂ, ಹಾಸನ ಜಿಲ್ಲೆಯ ಅರಕುಲಗೋಡು ಮತ್ತು ಸಕಲೇಶಪುರ ತಾಲ್ಲೂಕುಗಳಲ್ಲಿಯೂ ಮೈಸೂರು, ಬೆಂಗಳೂರು ನಗರಗಳಲ್ಲಿ ನೆಲಸಿದ್ದನ್ನು ಬಿಟ್ಟರೆ ಕರ್ನಾಟಕ ರಾಜ್ಯದ ಯಾವ ಜಿಲ್ಲೆಯಲ್ಲೂ ಗೌಡ ಎಂಬ ಜಾತಿಯು ಕಾಣುವುದಿಲ್ಲ. ಈಗ್ಯೆ 50 ವರ್ಷಗಳಿಂದ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರು ಮೈಸೂರು, ಬೆಂಗಳೂರು, ಮಂಡ್ಯ, ಹಾಸನ, ಚಿಕ್ಕ ಮಂಗಳೂರು ಮತ್ತು ಶಿವಮೊಗ್ಗ ಒಕ್ಕಲಿಗರೊಡನೆ ಕೆಲವರು ವಿವಾಹ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾರೆ. ಗೌಡರು ಸೋಮವಾರ ಪೇಟೆ ಕಡೆಯ ವಕ್ಕಲಿಗರು, ಮೈಸೂರು ಮಂಡ್ಯ,ಹಾಸನ, ಚಿಕ್ಕಮಗಳೂರು, ತುಮಕೂರು, ಶಿವಮೊಗ್ಗ, ಜಿಲ್ಲೆಯ ಬೆಂಗಳೂರು ಕಡೆಯ ಗಂಗಡಿಕಾರ, ಮರಸ್ಸು ಒಕ್ಕಲಿಗರೊಡನೆ ವಿವಾಹ ಸಂಬಂಧವನ್ನು ಮಾಡಿ ಕೊಂಡಿದ್ದಾರೆ. ಈ ರೀತಿ ವಿವಾಹ ಸಂಬಂಧ ಮಾಡುವಾಗ ಗಂಗಡಿಕಾರ ಒಕ್ಕಲಿಗರೊಡನೆ ಮಾತ್ರ ಮಾಡಬೇಕೆಂ[illegible]ಟ್ಟು ಪಾಡು ಮಾಡಲಿಲ್ಲ. ಒಟ್ಟಾರೆ ಒಕ್ಕಲಿಗರು ಎಂಬ[illegible]ಡನೆ ಸಂಬಂಧ ಬೆಳಸಿದರು. ಆದ್ದರಿಂದ ಹಿಂದುಳಿದ ವರ್ಗಗಳ ಯೋಗದವರು ಕೇಳಿದ ಪ್ರಶ್ನೆಗೆ ಕೆಲವರು ಒಕ್ಕಲಿಗರೊಡನೆ ಸಂಬಂಧವಿದೆ ಎಂದು ಹೇಳಿಕೊಂಡಿದ್ದಾರೆ. ಆಗ ಯಾವ ಒಕ್ಕಲಿಗರೊಡನೆ ಎಂದು ಕೇಳಿದರೆ ಅದಕ್ಕೆ ಉತ್ತರ ಇಲ್ಲ. ಸಂಬಂಧ ಎಂದರೆ ವಿವಾಹ ಸಂಬಂಧವೆಂದು ಹೇಳಲು ಸಾಧ್ಯವಿಲ್ಲ ಸಂಬಂಧವೇನೆಂದರೆ,

ಒಂದು ಜಾತಿಯ ಪದ್ಧತಿ ದೇವತಾರಾಧನೆ ಕುಲ ಮುಂತಾದವುಗಳಲ್ಲಿ ಒಂದೇ ರೀತಿಯ ಸಂಬಂಧವಿದ್ದರೆ ಮಾತ್ರ ಸಂಬಂಧವೆಂದು ಪರಿಗಣಿಸಬಹುದು. ಉದಾಹರಣೆಗೆ ಕೊಡಗು ಮತ್ತು ದಕ್ಷಿಣ ಜಿಲ್ಲೆಗಳಲ್ಲಿರುವ ಗೌಡರ ಭಾಷೆ ಅರೆಗನ್ನಡ ಭಾಷೆ ಮತ್ತು ತುಳು. ಇವರ ಗೋತ್ರಗಳು ಹದಿನೆಂಟು. ಇವರು ಪೂಜಿಸುವ ಮನೆದೇವರು ಶ್ರೀ ವೆಂಕಟರಮಣ. ಇವರುಗಳು ಮದುವೆ ಮತ್ತು ಶವಸಂಸ್ಕಾರಗಳಲ್ಲಿ ಆಚರಿಸುವ ಪದ್ಧತಿಗಳು ಬೇರೆ ಬೇರೆ. ಆದ್ದರಿಂದ ಈ ಗೌಡರನ್ನು ಗಂಗಡಿಕಾರ ಒಕ್ಕಲಿಗ, ಮರಸ್ಸು ಒಕ್ಕಲಿಗ, ಹಳ್ಳಿಕಾರ, ಕುಂಚಟಿಕ ಒಕ್ಕಲಿಗರ ಮನೆ ದೇವರ ಪೂಜೆ ಗೋತ್ರಗಳು ಹಾಗೂ ಭಾಷೆಯನ್ನು ಹೋಲಿಸಲು ಆಗುವುದಿಲ್ಲ. ಆದ್ದರಿಂದ ಗೌಡರು ವಿವಾಹ ಸಂಬಂಧ ಕಲ್ಪಿಸಿರುವ ಒಕ್ಕಲಿಗರ ಆಚಾರ ವಿಚಾರಗಳನ್ನು ಕೊಟ್ಟನಂತರ ಗೌಡರ ಆಚಾರ ವಿಚಾರಗಳನ್ನು ಕೊನೆಗೆ ಕೊಡುತ್ತೇನೆ.

(ಮುಂದುವರಿಯುವುದು)

# ಕೊಡವ ಸಾಹಿತ್ಯ ಕೃಷಿಯೊಲ್ಲೊಂದು ಭಗೀರಥ ಸಂಸ್ಥೆ

### *ಕೊಡವ ತಕ್ಕ್ ಎಳ್ತ್‌ಕಾರಡ ಕೂಟ*

ಕರ್ನಾಟಕ ಪ್ರಾದೇಶಿಕ ದೇಶಗಳಲ್ಲಿ ಕೊಡವ ಭಾಷೆಯೂ ಒಂದು. ಇತರೆ ಪ್ರಾದೇಶಿಕ ಭಾಷೆಗಳಿಗೆ ಹೋಲಿಸಿದಲ್ಲಿ ಕೊಡವ ಭಾಷಾ ಸಾಹಿತ್ಯ ನಿರೀಕ್ಷಿತ ಮಟ್ಟದಲ್ಲಿ ಬೆಳೆದು ಬಂದಿಲ್ಲ ಎಂಬ ವ್ಯಾಪಕ ದೂರು ಇದೆ. ಕೊಡಗಿನಲ್ಲಿ ನಾಗರೀಕತೆಯ ಪ್ರಭಾವದಿಂದಾಗಿ ಇಂಗ್ಲೀಷ್ ಭಾಷೆ ಕೊಡವ ಭಾಷೆಯ ಮೇಲೆ ಪ್ರಾಬಲ್ಯ ಸಾಧಿಸುತ್ತಿರುವುದು ಇದಕ್ಕೆ ಮತ್ತೊಂದು ಕಾರಣ. ಈ ಹಿನ್ನಲೆಯಲ್ಲಿ ಕೊಡವ ಸಾಹಿತ್ಯಾಸಕ್ತರ ಸಂಖ್ಯೆ ಇತರೆ ಪ್ರಾದೇಶಿಕ ಭಾಷೆಗಳ ಮಟ್ಟಿಗೆ ತೆಗೆದುಕೊಂಡರೆ ಅತೀ ಕಡಿಮೆ. ಕೊಡವ ಭಾಷಾ ಬೆಳವಣಿಗೆ ಗೋಸ್ಕರ ಅಕಾಡೆಮಿಯಂತಹ ಸಂಸ್ಥೆಯನ್ನು ಸ್ಥಾಪಿಸಲಾಗಿದ್ದರೂ ಪ್ರಕಟಗೊಂಡ ಪುಸ್ತಕಗಳ ಸಂಖ್ಯೆ ಮೂರಂಕಿಯನ್ನು ದಾಟಿರಲಿಲ್ಲ.ಆದರೆ ವಿರಳ ಕೊಡವ ಸಾಹಿತ್ಯಾಸಕ್ತರ ನಡುವೆಯೂ ಕೊಡವ ಸಾಹಿತ್ಯವನ್ನು ಮೇರು ಪರ್ವತಕ್ಕೆ ಕೊಂಡೊಯ್ಯಲು ಭಗೀರಥ ಪ್ರಯತ್ನ ನಡೆಸಿರುವ ಸಂಸ್ಥೆಯಲ್ಲಿ ಕೊಡವ ತಕ್ಕ್ ಎಳ್ತ್‌ಕಾರಡ ಕೂಟ(ರಿ)ವೂ ಒಂದು.

ಕೊಡಗಿನಲ್ಲಿ ಆದಿಕವಿ ಹರದಾಸ ಅಪ್ಪಚ್ಚ ಕವಿ ನಡಿಕೇರಿಯಂಡ ಚಿಣ್ಣಪ್ಪ, ಐ. ಮಾ. ಮುತ್ತಣ್ಣ ಅವರನ್ನು ಹೊರತುಪಡಿಸಿದರೆ ಸ್ವಯಂ ಸ್ಫೂರ್ತಿಯಿಂದ ಕೊಡವ ಸಾಹಿತ್ಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದವರ ಸಂಖ್ಯೆ ಬೆರಳೆಣಿಕೆಯಷ್ಟೇ. ಇಂತಹ ಪ್ರಸಂಗವನ್ನು ಮನಗಂಡು ಕೊಡವ ಭಾಷೆಯನ್ನಾಡುವವರಲ್ಲಿ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸಿ ಅವರನ್ನು ಈ ಕ್ಷೇತ್ರಕ್ಕೆ ಎಳೆದು ತರುವ ಕೆಲಸವನ್ನು ಕೂಟವು ಕಳೆದ ೧೦ ವರ್ಷಗಳಿಂದಲೂ ನಡೆಸುತ್ತ ಬಂದಿದೆ. ಕೊಡವ ಸಾಹಿತ್ಯ ಬೆಳವಣಿಗೆ ಕಂಡಿದ್ದು ಕೂಡ ಈ ೧೦ ವರ್ಷಗಳ ಅವಧಿಯಲ್ಲಿಯೇ ಎಂಬುದು ಗಮನಾರ್ಹ. ಕೊಡವ ತಕ್ಕ್ ಎಳ್ತ್ ಕಾರಡ ಕೂಟವು ತಾನೇ ಪ್ರಕಟಪಡಿಸಿದ ಪುಸ್ತಕಗಳ ಸಂಖ್ಯೆ ಇದೀಗ ೩೩ಕ್ಕೆ ಏರಿದೆ. ೨೦೦೦ ನೇ ಸಾಲಿನ ಏಪ್ರಿಲ್‌ನಿಂದ ಕೂಟವು ಆರಂಭಿಸಿದ ಜನಪ್ರಿಯ ಕೊಡವ ಸಾಹಿತ್ಯ ಮಾಲೆ ಎಂಬ ಯೋಜನೆಯಡಿ ಪ್ರತಿತಿಂಗಳೂ ಕನಿಷ್ಟ ಒಂದು ಪುಸ್ತಕವನ್ನು ಹೊರ ತರುತ್ತಿದ್ದು,ಇದೇ ತಿಂಗಳು ಏ. ೨೮ ರಂದು ಈ ಯೋಜನೆಯ ಮೂವತ್ತನೇ ಪುಸ್ತಕ ಬಿಡುಗಡೆಗೊಳ್ಳುತ್ತಿದೆ. ಎಲೆಮರೆಯ ಕಾಯಿಯಂತಿರುವ ಸಾಹಿತಿಗಳನ್ನು ಬೆಳಕಿಗೆ ತಂದು ಸಾಹಿತ್ಯಾಸಕ್ತ ದಾನಿಗಳಿಂದ ಹಣ ಸಂಗ್ರಹಿಸಿ ದಾನಿಗಳ ಹೆಸರಿನಲ್ಲಿಯೇ ಪುಸ್ತಕ ಬಿಡುಗಡೆ ಮತ್ತು ಕೊಡವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಈ ಅವಧಿಯಲ್ಲಿ ಕೂಟವು ನಿರಂತರವಾಗಿ ನಡೆಸಿಕೊಂಡು ಬರುತ್ತಿದೆ. ಕೇವಲ ಪ್ರಮುಖ ಸ್ಥಳಗಳಿಗೆ ಮಾತ್ರವೇ ತನ್ನ ಕಾರ್ಯಕ್ರಮವನ್ನು ಸೀಮಿತಗೊಳಿಸದೆ ಕುಗ್ರಾಮಗಳೂ ಸೇರಿದಂತೆ ಕೊಡಗಿನ ಮೂಲೆ ಮೂಲೆಗಳಲ್ಲಿ ಸಾಹಿತ್ಯ ಸಾಂಸ್ಕೃತಿಕ ಪರಿಮಳವನ್ನು ಬೀರಿದೆ.

ಕೊಡಗಿನ ವಿಶೇಷ ಪಟ್ಟ ವ್ಯಕ್ತಿತ್ವ, ಆಚಾರ, ವಿಚಾರ, ಪದ್ಧತಿ ಪರಂಪರೆ, ಶಾಸ್ತ್ರ ಸಂಪ್ರದಾಯ ನಾಡಿನ ಪರಿಸರ ಜನ ಜೀವನ ಇದೇ ಪ್ರಮುಖ ವಿಷಯಗಳನ್ನಾಧರಿಸಿ ಕೂಟವು ಕಾರ್ಯಕ್ರಮ ರೂಪಿಸಿಕೊಂಡು ಬರುತ್ತಿದೆ.

ವೀರಾಜಪೇಟೆಯಲ್ಲಿ ಎರಡು ಹಾಗೂ ಪೊನ್ನಂಪೇಟೆಯಲ್ಲಿ ಒಂದು ಸೇರಿದಂತೆ ಕೂಟವು ಮೂರು ಬೃಹತ್ ಕೊಡವ ಸಾಂಸ್ಕೃತಿಕ ಮೇಳವನ್ನು ನಡೆಸಿದೆ. ಕೊಡಗಿನ ಪ್ರಮುಖ ಆರ್ಥಿಕ ಬೆಳೆಗೆ ಬೆಲೆ ಇಲ್ಲದ ಸಂದರ್ಭದಲ್ಲಿ ಸಾಹಿತ್ಯಕ್ಕಾಗಿ ಹಣ ವಿನಿಯೋಗಿಸುವವರನ್ನು ಪತ್ತೆ ಹಚ್ಚಿ ಕಾರ್ಯಕ್ರಮ ರೂಪಿಸುವುದು ಸಾಮಾನ್ಯ ಕೆಲಸವಲ್ಲ ದಿದ್ದರೂ ಕೂಡ ಪದಾಧಿಕಾರಿಗಳ ಶ್ರಮ ಹಾಗೂ ಸಾಹಿತ್ಯಾಸಕ್ತಿ ಈ ಕೆಲಸವನ್ನು ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

ಉಳ್ಳಿಯಡ ಎಂ. ಪೂವಯ್ಯ ಅವರ ಅಧ್ಯಕ್ಷತೆಯಲ್ಲಿ ಮುನ್ನಡಿ ಯಿಡುತ್ತಿರುವ ಈ ಸಂಸ್ಥೆಗೆ ಬೆಂಗಾವಲಾಗಿ ಉಪಾಧ್ಯಕ್ಷ ಮುದ್ದಿಯಡ ಕುಳ, ಕಾರ್ಯದರ್ಶಿ ಚೆಟ್ಟಂಗಡ ರವಿ ಸುಬ್ಬಯ್ಯ, ಖಜಾಂಚಿ ಅಮ್ಮಣಿಚಂಡ ಪ್ರವೀಣ್ ಚಂಗಪ್ಪ, ಸಹ ಕಾರ್ಯದರ್ಶಿ ಉಳ್ಳಿಯಡ ಡಾಟಿ ಪೂವಯ್ಯ, ಸಂಘಟನಾ ಕಾರ್ಯದರ್ಶಿಗಳಾದ ಬೊಟ್ಟೋಳಂಡ ಮಿಟ್ಟು ಪೂಣಚ್ಚ ತಂಬಾಂಡ ಡ್ಯಾನಿ ನಾಣಯ್ಯ, ನಾಗೇಶ್ ಕಾಲೂರ್, ಕಳ್ಳಿಚಂಡ ರಾಬಿನ್ ಸುಬ್ಬಯ್ಯ ನಾಯಕಂಡ ಬೇಬಿ ಚಿಣ್ಣಪ್ಪ, ತಾತಂಡ ಪ್ರಭಾ ನಾಣಾಲಿಯ ಬೋಡಂಗಡ ಜಗದೀಶ್, ತಿಮ್ಮಯ್ಯ ತೊಟ್ಟಂಗಡ ಸುಬ್ಬಯ್ಯ ತಾತಂಡ ರಾಣಿ ನಂಜಪ್ಪ ಅವರುಗಳು ದುಡಿಯುತ್ತಿದ್ದಾರೆ.

ಸಂಸ್ಥೇಯ ಸಾಧನೆಯ ಹಾದಿಯಲ್ಲಿ ಸಾಗಿರುವ ಕೂಟವು ಕೊಡಗಿನ ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಇನ್ನಷ್ಟು ಬೆಳವಣಿಗೆಗಳನ್ನು ಮೂಡಿಸಲು ಎಂದು ಆಶಿಸೋಣ.

-ಸಂಗಾತಿ

# ಕೊಡಗು - ಮಂಡ್ಯ ಜನತೆಯ ಸ್ನೇಹ ಸಂಬಂಧ ಚಿರಾಯುವಾಗಿರಲು ಗಣ್ಯರ ಹಾರೈಕೆ

***ಕೊಡಗು - ಮಂಡ್ಯ ಕಾವೇರಿ ಉತ್ಸವಕ್ಕೆ ಚಾಲನೆ ಶೋಭಾಯಮಾನವಾಗಿ ಮೆರೆದ ಸಾಂಸ್ಕೃತಿಕ ಮೆರವಣಿಗೆ***



ಮಂಡ್ಯ ಹಾಗೂ ಕೊಡಗು ಸಾಂಸ್ಕೃತಿಕ ಉತ್ಸವ ಸಮಿತಿಯ ಆಶ್ರಯದಲ್ಲಿ ಎರಡು ದಿನಗಳ ಕಾವೇರಿ ಉತ್ಸವವು ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರ ಗೈರು ಹಾಜರಿಯೊಂದಿಗೆ ಇಲ್ಲಿನ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾ ಮಂದಿರದಲ್ಲಿ ಆರಂಭಗೊಂಡಿತು. ಮಂಡ್ಯ ಮಹಿಳಾ ಒಕ್ಕೂಟದಿಂದ "ಜಯ ಭಾರತ ಜನನಿಯ ತನುಜಾತೆ" ನಾಡಗೀತೆ ಹಾಗೂ ಕೊಡಗಿನ ಹಿರಿಮೆಯನ್ನು ಮೇಳೈಸುವ "ಎಲ್ಲಿ ಭೂರಮೆ ದೇವಿ ಸನ್ನಿಧಿ"ಗೀತೆಯೊಡಗೂಡಿ ಉತ್ಸವಕ್ಕೆ ಚಾಲನೆ ನೀಡಲಾಯಿತು. ಕಲಾ ಮಂದಿರದಲ್ಲಿ ಕಾವೇರಿ ಮಾತೆಯ ಸ್ತಬ್ಧ ಚಿತ್ರದೊಂದಿಗೆ ಕೊಡಗು-ಮಂಡ್ಯ ಸಂಸ್ಕೃತಿ ಮತ್ತು ಕಾಫಿ, ಕಬ್ಬಿನ ಹಿರಿಮೆಯನ್ನು ಪ್ರತಿಬಿಂಬಿಸುವ ವಿಶಾಲ ವೇದಿಕೆಯಡಿ ಉತ್ಸವ ಆರಂಭಗೊಂಡಿತು. ಉತ್ಸವದ ಅಂಗವಾಗಿ ಕಲಾ ಮಂದಿರದ ಹೊರ ಆವರಣದಲ್ಲಿ ಕೊಡಗು ಮತ್ತು ಮಂಡ್ಯ ಜನತೆಯ ವಿಶೇಷ ಅಡುಗೆಯಿಂದ ಕೂಡಿದ ಆಹಾರ ಮೇಳ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದಿಂದ ಪ್ರಕಟಗೊಳ್ಳುವ ಪುಸ್ತಕಗಳ ಸಾಹಿತ್ಯ ಮೇಳವನ್ನು ಕ್ರಮವಾಗಿ ಸಚಿವರುಗಳಾದ ಎಂ. ಎಂ. ನಾಣಯ್ಯ ಹಾಗೂ ಆ ಬಳಿಕ ಆರಂಭಗೊಂಡ ಸಭಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೊಡಗು ಜಿಲ್ಲಾ ಉಸ್ತುವಾರಿ ಸಚಿವರಾದ ರಾಜ್ಯ ಅಬಕಾರಿ ಸಚಿವ ನಾಣಯ್ಯ ಅವರು ವಹಿಸಿದ್ದರು. ಮಂಡ್ಯ ಜಿಲ್ಲಾ ಉಸ್ತುವಾರಿ ಸಚಿವರಾದ ರಾಜ್ಯ ವಾರ್ತಾ ಸಚಿವ ಎಂ. ಶಿವಣ್ಣ ಅವರು ಮೇಳವನ್ನು ಉದ್ಘಾಟಿಸಿ ಮಾತನಾಡುತ್ತಾ ಕಾವೇರಿ ಮಾತೆ ಮಂಡ್ಯ ಜನತೆಗೆ ಸಿರಿ ಸಮೃದ್ಧಿಯನ್ನು ನೀಡಿದ್ದು, ಈ ಎರಡೂ ನಾಡಿನ ಜನತೆಯ ನಡುವಿನ ಬಾಂಧವ್ಯ ಸೂರ್ಯ ಚಂದ್ರರಿರುವ ತನಕ ಬೆಸೆಯುವದರೊಂದಿಗೆ ನಿರಂತರವಾಗಿ ಈ ಉತ್ಸವಗಳು ನಡೆಯುವಂತಾಗಲೆಂದು ಹಾರೈಸಿದರು. ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ನಾಣಯ್ಯ ಅವರು, ಕೊಡಗಿನ ಶ್ರೀಮಂತಿಕೆ ಮತ್ತು ಮಂಡ್ಯ ಜನತೆಯ ವಿಶಾಲ ಮನೋಭಾವನೆಯ ತಳಹದಿಯಲ್ಲಿ ಏರ್ಪಡಿಸಿರುವ ಈ ಉತ್ಸವ ಉಭಯ ಜಿಲ್ಲೆಗಳ ಜನತೆಯ ಬಾಂಧವ್ಯ ವೃದ್ಧಿಸಲು ಇನ್ನಷ್ಟು ನಾಂದಿಯಾಗಲೆಂದು ಹಾರೈಸಿದ್ದರು. ಈ ನಾಡಿನವರಾದ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ಕೊಡಗಿನ ಮೇಲಿನ ಅಭಿಮಾನದೊಂದಿಗೆ ಮೂವರಿಗೆ ಸಚಿವ ಸ್ಥಾನ ನೀಡಿ ಕೊಡಗಿನವರೇ ಆಗಿರುವ ಪ್ರೇಮಾ ಕಾರ್ಯಪ್ಪ ಅವರನ್ನು ರಾಜ್ಯ ಸಭೆಗೆ ಕಳುಹಿಸಿ ಕೊಡುವಲ್ಲಿ ಹೃದಯ ಶ್ರೀಮಂತಿಕೆ ಮೆರೆದಿದ್ದಾರೆ ಎಂದು ಕೊಂಡಾಡಿದರು.

ಸಮಾರಂಭದಲ್ಲಿ ಸಚಿವರಾದ ಟಿ. ಜಾನ್. ಶಾಸಕರುಗಳಾದ ಎಂ. ಎಸ್. ಆತ್ಮಾನಂದ, ವಿಧಾನ ಪರಿಶತ್ ಸದಸ್ಯ ಡಿ. ರಮೇಶ್‌ರಾಜು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ ಶ್ರೀ ಎಸ್. ಕೇದರ್, ಕೊಡಗು ಮಂಡ್ಯ ಸಾಂಸ್ಕೃತಿಕ ಒಕ್ಕೂಟದ ಅಧ್ಯಕ್ಷ ಎಂ. ಟಿ. ವಿಜೇಂದ್ರ ಅವರುಗಳು ಮಾತನಾಡುತ್ತಾ ಈ ಉತ್ಸವದಿಂದ ಉಭಯ ಜಿಲ್ಲೆಯ. ಜನತೆಯಲ್ಲಿ ಭಾತೃತ್ವ ಮೆರೆಯುವಂತಾಗಲೆಂದು ಹಾರೈಸಿದರು. ಸೋಮವಾರಪೇಟೆಯ ಸಾಂದೀಪನಿ ಶಾಲೆಯ ವಿದ್ಯಾರ್ಥಿನಿ ವಂಶಿ ತನ್ನ ಪುಟ್ಟ ನುಡಿ ಭಾಷಣದಲ್ಲಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು, ದಂಪತಿಯೊಡಗೂಡಿ ಬಂದು ತಲಕಾವೇರಿಯಲ್ಲಿ ಸೇವೆ ಸಲ್ಲಿಸಬೇಕೆಂಬ ಆಶಯ ಕೊಡಗಿನ ಜನತೆಯದ್ದಾಗಿದ್ದು, ಅದನ್ನು ನೆರವೇರಿಸಲೇಬೇಕೆಂದು ಅಂತರಾಳದ ನುಡಿಯಾಡಿದಳು. ಉತ್ಸವ ಸಮಿತಿಯ ಗೌರವ ಅಧ್ಯಕ್ಷ ಎಂ. ಲಿಂಗಯ್ಯ ಸೇರಿದಂತೆ ಅನೇಕ ಗಣ್ಯರು ಪಾಲ್ಗೊಂಡಿದ್ದ ಸಮಾರಂಭದಲ್ಲಿ ಪ್ರಧಾನ ಕಾರ್ಯದರ್ಶಿ ಶಿವಲಿಂಗಯ್ಯ ಪ್ರಸ್ತಾವಿಕ ನುಡಿಯಾಡಿದರು. ಅಧ್ಯಕ್ಷರಾದ ಎಸ್. ಎಂ. ಶಂಕರ್ ಅವರು ಅತಿಥಿಗಣ್ಯರನ್ನು ಸ್ವಾಗತಿಸಿದರು. ಪ್ರೊ. ಜಯಪ್ರಕಾಶ್ ಗೌಡ ಕಾರ್ಯಕ್ರಮ ನಿರೂಪಿಸಿದರು. ಈ ಸಂದರ್ಭ ಕಾವೇರಿ ಉತ್ಸವದ ಸ್ಮರಣ ಸಂಚಿಕೆ "ಸ್ನೇಹ ಸೇತು'ವನ್ನು ಬಿಡುಗಡೆಗೊಳಿಸಲಾಯಿತು. ಸಭಾ ಕಾರ್ಯಕ್ರಮದ ಬಳಿಕ ಕೊಡಗು-ಮಂಡ್ಯ ಸಾಂಸ್ಕೃತಿಕ ಕಲೆಗಳನ್ನು ಪ್ರತಿಬಿಂಬಿಸುವ ವಿವಿಧ ಕಾರ್ಯಕ್ರಮಗಳು ಮುಂದುವರೆದವು.

ಕೊಡಗು ಹಾಗೂ ಮಂಡ್ಯ ಜನತೆಯ ನಡುವೆ ಸ್ನೇಹ ಬಾಂಧವ್ಯದೊಂದಿಗೆ ಕಾವೇರಿ ಮಾತೆಗೆ ಕೃತಜ್ಞತಪೂರ್ವಕವಾಗಿ ಮಂಡ್ಯ ನಗರಿಯಲ್ಲಿ ಏರ್ಪಡಿಸಿರುವ ಕೊಡಗು ಮಂಡ್ಯ

ಅವ ಯಾವಗಳೆಲ್ಲರಿಗೆ, ಸಮನಾಗಿ ಇರುತಿರಲು

ಸಾಂಸ್ಕೃತಿಕ ಉತ್ಸವಕ್ಕೆ ಇಂದು ಕಾವೇರಿ ಮಾತೆಗೆ ಪೂಜೆ ಸಲ್ಲಿಸುವ ಮೂಲಕ ಚಾಲನೆ ನೀಡಲಾಯಿತು. ಮಂಡ್ಯ ನಗರದ ಕಾವೇರಿ ಉದ್ಯಾನವನದ ಸಂಗೀತ ಕಾರಂಜಿ ನಡುವಿನ ಕಾವೇರಿ ಮಾತೆ ಪ್ರತಿಮೆಗೆ ಕರ್ನಾಟಕದ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರ ಸಹೋದರರಾದ ಉತ್ಸವ ಸಮಿತಿ ಅಧ್ಯಕ್ಷ, ಎಸ್. ಎಂ. ಶಂಕರ್ ಅವರು ಮಾಲಾರ್ಪಣೆಯೊಂದಿಗೆ ಪೂಜೆ ಸಲ್ಲಿಸಿದ ಬಳಿಗ ಸರ್ ಎಂ. ವಿಶ್ವೇಶ್ವರಯ್ಯ ಪ್ರತಿಮೆಗೆ ಹಾರಾರ್ಪಣೆಯೊಂದಿಗೆ ಮೆರವಣಿಗೆಗೆ ಹಸಿರುನಿಶಾನೆ ನೀಡಲಾಯಿತು.

ಕೊಡಗು-ಮಂಡ್ಯ ಜಿಲ್ಲೆಗಳ ಸಮ್ಮಿಳಿತವನ್ನು ಪ್ರತಿಬಿಂಬಿಸುವ ವಾದ್ಯ ತಂಡಗಳ ಕಿವಿಗಡಚಿಕ್ಕುವ ಶಬ್ಧವಾದರೆ ಹಾಗೂ ಸಿಡಿಮದ್ದುಗಳ ಭರಾಟೆಯ ನಡುವೆ ಉಭಯ ಜಿಲ್ಲೆಗಳ ಸಾಂಸ್ಕೃತಿಕ ಕಲಾ ತಂಡಗಳು ಶಬ್ದ ನಿನಾದಕ್ಕೆ ತಕ್ಕಂತೆ ಸಾಂಸ್ಕೃತಿಕ ಕಲೆ, ಉಡುಗೆ, ತೊಡುಗೆಗಳನ್ನು ಪ್ರತಿಬಿಂಬಿಸುವ ಮೂಲಕ ಮೆರವಣಿಗೆಯಲ್ಲಿ ಸಾಗಿದಾಗ ರಸ್ತೆಯ ಇಕ್ಕೆಡೆಗಳಲ್ಲಿ ಕಿಕ್ಕಿರಿದ ಜನಸ್ತೋಮ ಅಚ್ಚರಿಯ ನೋಟ ಹರಿಸಿದ ದಗೃಶ್ಯ ಎದುರಾಯಿತು. ಕೊಡಗು-ಮಂಡ್ಯ ಜಿಲ್ಲೆಗಳ ಬಾಂಧವ್ಯಕ್ಕೆ ನಾಂದಿ ಎಂಬಂತೆ ಉಭಯ ನಾಡಿನ ಕಲೆಗಳಾದ ನಾದಸ್ವರ, ಸುಗ್ಗಿ ಕುಣಿತ,ಎರವರ ಕುಣಿತ, ಕುರುಬರು ಕುಣಿತ, ಸಿದ್ದವೇಷ, ಹುತ್ರಿ ಗೌಡರ ಕೋಲಾಟ, ಕಂಗೇಲು ವೇಷ, ದಫ್, ಕೊಡಗು ವಾಲಗ, ಬೊಳಕಾಟ್, ಕೋಲಾಟ್, ಕತ್ತಿಯಾಟ್, ನಂದಿಧ್ವಜ, ಪಟದ ಕುಣಿತ, ಪೂಜಾ ಕುಣಿತ ವಿರಭದ್ರ ಕುಣಿತ, ಕತ್ತಿವರಸೆ, ಕೀಕ್ಕಕುದುರೆ, ತಮಟೆ ನಗಾರಿ, ಕೊಂಬು ಕಹಳೆ ಇನ್ನೂ ಮುಂತಾದ ಕಲೆಗಳೊಂದಿಗೆ ಮೆರವಣಿಗೆ ಶೋಭಾಯಮಾನವಾಗಿ ಮುಂದುವರೆಯಿತು. ಸರ್. ಎಂ. ವಿಶ್ವೇಶ್ವರಯ್ಯ ಪ್ರತಿಮೆ ಮುಂಭಾಗದಿಂದ ಮಂಡ್ಯ ನಗರಿಯ ಎಂ. ಜಿ. ರಸ್ತೆ, ನೂರಡಿ ರಸ್ತೆ, ಬನ್ನೂರು ರಸ್ತೆ, ವಿ. ವಿ. ರಸ್ತೆ ಮುಖಾಂತರ ಮೆರವಣಿಗೆಯು ಸುಡು ಬಿಸಿಲಿನ ತಾಪದ ನಡುವೆಯೂ ಸಾಗುವದರೊಂದಿಗೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾ ಮಂದಿರದ ತನಕ ಸಾಗಿತು.

**ಕಾವೇರಿ ಕ್ಷೇತ್ರದ ಅಭಿವೃದ್ಧಿಗೆ ರೂ. 2ಕೋಟಿ ಬಿಡುಗಡೆಗೊಳಿಸಲು ಮುಖ್ಯಮಂತ್ರಿಗೆ ಅಗ್ರಹ ಕಾವೇರಿ ಉತ್ಸವದ ಸಮಾರೋಪ ಸಮಾರಂಭದಲ್ಲಿ ಚಂದ್ರಕಲಾ ಬೇಡಿಕೆ**

ಕಳೆದೆರಡು ದಿನಗಳಿಂದ ಜರುಗಿದ ಕೊಡಗು-ಮಂಡ್ಯ ಸಾಂಸ್ಕೃತಿಕ ಉತ್ಸವ ಸಮಿತಿಯ ಆಶ್ರಯದ ಕಾವೇರಿ ಉತ್ಸವದ ಸಮಾರೋಪ ಸಮಾರಂಭವು 24-5-2002ರ ಸಂಜೆ ಜರುಗುವದರೊಂದಿಗೆ ಸಮಾರೋಪ ಭಾಷಣ ಮಾಡಿದ ಕೊಡಗು ಜಿಲ್ಲಾಪಂಚಾಯಿತಿ ಮಾಜಿ ಅಧ್ಯಕ್ಷೆ ಹಾಗೂ ಸದಸ್ಯೆ ಕೆ. ಪಿ. ಚಂದ್ರಕಲಾ ಅವರು ಕಾವೇರಿ ನೀರಿನಿಂದ ಲಾಭ ಪಡೆದಿರುವ ಮಂಡ್ಯದ ಜನತೆಪರವಾಗಿ ರಾಜ್ಯದ ಮುಖ್ಯಮಂತ್ರಿ ಈ ನಾಡಿನವರೇ ಆದ ಎಸ್. ಎಂ. ಕೃಷ್ಣ ಅವರು, ತಲಕಾವೇರಿ ಕ್ಷೇತ್ರದ ಅಭಿವೃದ್ಧಿಗಾಗಿ ರೂ. 2ಕೋಟಿ ಹಣವನ್ನು ಬಿಡುಗಡೆಗೊಳಿಸಬೇಕೆಂದು ಆಗ್ರಹಪೂರ್ವಕ ಬೇಡಿಕೆಯನ್ನು ಮುಂದಿಟ್ಟರು.

ಇಲ್ಲಿನ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಕಲಾ ಮಂದಿರದಲ್ಲಿ ಕಾವೇರಿ ಉತ್ಸವದ ಸಮಾರೋಪ ಭಾಷಣ ಮಾಡುತ್ತಾ ಅವರು, ಮಂಡ್ಯದ ಜನತೆ ಕಾವೇರಿ ನೀರಿನಿಂದ ಪಾವನರಾಗುವರದೊಂದಿಗೆ ಆರ್ಥಿಕವಾಗಿ ಸಾಂಸ್ಕೃತಿಕವಾಗಿ ರಾಜಕೀಯವಾಗಿ ಲಾಭ ಪಡೆದಿರುವ ಕಾರಣ ಇದೀಗ ರಾಜ್ಯದ ನಂ. 1 ಮುಖ್ಯಮಂತ್ರಿ ಎನಿಸಿಕೊಂಡಿರುವ ಮಂಡ್ಯದ ಎಸ್. ಎಂ. ಕೃಷ್ಣ ಅವರು ತಲಕಾವೇರಿ ಕ್ಷೇತ್ರಕ್ಕೆರೂ. 2 ಕೋಟಿಯನ್ನು ಬಿಡುಗಡೆಗೊಳಿಸುವಂತದ್ದು ಔಚಿತ್ಯಪೂರ್ಣವೆಂದು ಚಂದ್ರಕಲಾ ಪ್ರತಿಪಾದಿಸಿದರು. ಬಹುಶಃ ಕಾವೇರಿ ಮಾತೆಯ ಆಶೀರ್ವಾದದಿಂದಲೇ ಮುಖ್ಯಮಂತ್ರಿ ಸ್ಥಾನದಲ್ಲಿ ಅತ್ಯುನ್ನತ ಕೀರ್ತಿ ಪಡೆದಿರುವ ಮುಖ್ಯಮಂತ್ರಿಗಳು ಕೊಡಗಿನ ಜನತೆಯ ಈ ಬೇಡಿಕೆಯನ್ನು ಮನ್ನಿಸುವಂತಾಗಬೇಕೆಂದು ಮಾರ್ನುಡಿದರು.

ಕೊಡಗಿನ ಜನ ಕಾವೇರಿಯ ಹನಿ ನೀರನ್ನು ಕೂಡ ಬಳಸಿಕೊಳ್ಳದಿದ್ದರೂ ಅದರ ಎಲ್ಲ ಲಾಭ ಮಂಡ್ಯ- ಮೈಸೂರಿನ ಜನತೆ ಪಡೆಯುತ್ತಿರುವದನ್ನು ಇಲ್ಲಿ ಮರೆಯುವಂತಿಲ್ಲ ಎಂದು ಚಂದ್ರಕಲಾ ನೆನಪಿಸಿದರು. ಉತ್ತರ ಭಾರತದಲ್ಲಿ ಗಂಗಾ ಉತ್ಸವದಂತೆಯೇ ಕಾವೇರಿ ಉತ್ಸವವನ್ನು ಕೂಡ ವರ್ಷಂಪ್ರತಿ ಆಚರಿಸುವಂತಾಗಬೇಕೆಂದು ಆಶಿಸಿದ ಚಂದ್ರಕಲಾ ಅವರು ಕೊಡಗು ಎಂದಿಗೂ ಕರ್ನಾಟಕದಿಂದ ಪ್ರತ್ಯೇಕ ರಾಜ್ಯವೂ ಆಗದು.ಕೇರಳದ ಗಡಿಯಲ್ಲಿ ಈ ನಾಡಿರುವುದರಿಂದ ಇದೊಂದು ಮಲೆಯಾಳ ರಾಜ್ಯವಾದೀತು ಎನ್ನುವ ಆತಂಕವೂ ಕರ್ನಾಟಕದ ಜನತೆಗೆ ಇರಬೇಕಿಲ್ಲವೆಂದು ಸ್ಪಷ್ಟ ಪಡಿಸಿದರು.

ಕೊಡಗು ಕರ್ನಾಟಕದ ಅವಿಭಾಜ್ಯ ಅಂಗವಾಗಿಯೇ ಉಳಿಯುವದರೊಂದಿಗೆ ಈ ನಾಡಿನ ಜನತೆಯ ಅತ್ಯುನ್ನತ ಸಂಸ್ಕೃತಿ ಮತ್ತು ಉಡುಗೆ ತೊಡುಗೆಗಳು ಇತರರಿಗೆ ಮಾದರಿಯಾಗಿದೆ ಎಂಬುದನ್ನು ಯಾರೂ ಮರೆಯಬಾರದೆಂದು ಅವರು ನೆನಪಿಸುತ್ತಾ, ಕೊಡಗನ ಜನತೆಯ ಉದಾರತೆಯನ್ನು ದೌರ್ಬಲ್ಯವೆಂದು ಪರಿಗಣಿಸದಿರುವಂತೆ ತಿಳಿ ಹೇಳಿದರು.

ಕೊಡಗು ಮತ್ತು ಮಂಡ್ಯದ ನಡುವೆ ಸ್ನೇಹ ಸಂಬಂಧ ಚಿರಸ್ಥಾಯಿಗೊಳಿಸುವ ದಿಸೆಯಲ್ಲಿ ಕಾವೇರಿ ಉತ್ಸವ ಆಚರಣೆಗೆ ಶ್ರಮಿಸಿದ ಉಭಯ ನಾಡಿನ ಪ್ರಮುಖರನ್ನು ಅವರು ಮುಕ್ತ ಕಂಠದಿಂದ ಶ್ಲಾಘಿಸುತ್ತಾ, ಮಂಡ್ಯದ ಜನತೆ ತಲಕಾವೇರಿ ಕ್ಷೇತ್ರದ ಅಭಿವೃದ್ಧಿಯನ್ನು ಮರೆಯದೆ ಕೊಡಗಿನ ಜನತೆಯೊಂದಿಗೆ ಕೈ ಜೋಡಿಸುವಂತಾಗಬೇಕೆಂದು ಕಳಕಳಿಯ ನುಡಿಯಾಡಿದರು.

-ಸಂಗಾತಿ

---

ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು

---



ಅಮ್ಮಾಜೀರ ಪೊನ್ನಪ್ಪ ಮುತ್ತು ನೀಲಮ್ಮ ದಂಪತಿಗಳು

## ಜೀವಾವಧಿ ನೀಡಿ ಸಹಕರಿಸ್ಯೊಳೊ.

ಶ್ರೀಯುತರು ಕೊಡಗು ಸಂಗಾತಿ ಅಭಿವೃದ್ಧಿ ಬಯಸಿ ಜೀವಾವಧಿ ಸದಸ್ಯತನ ರೂ.2000/- ನೀಡಿ ಸಹಕರಿಸ್ಯೊಳೊ. ಇವು ಕಾವೇರಿ ನಾಡ್, ವಿದ್ಯಾಸಂಸ್ಥೆ, ಹಂಗೆ ಬೆಂಗಳೂರಿನಲ್ಲಿದ್ದ್ ಕಂಡ್ ಕಾವೇರಿ ನಾಡ್‌ನ ಮಾಡಿಕ್ಕಂಡ್ ಜನ್ರಿಗೆ ನಿವೇಶನ ನೀಡ್ತಾ ಒಳೊ. ಹಂಗೆನೆ ಕೊಡಗಿನ ಪ್ರೀತಿಂದ "ಪೊನುದ್ವನಿ" ಕ್ಯಾಸೆಟ್ ಬಿಡ್‌ಗಡೆ ಮಾಡಿ ಜನಾನುರಾಗಿಯೋಳೊ. ಇವರ ಪರಿಚಯನ ಸಂಗಾತಿ ಈ ಹಿಂದೆ ನೀಡಿಟ್ಟು. ಇವುಕ್ಕೆ ಶ್ರೀ ವೆಂಕಟರಮಣ ಸ್ವಾಮಿ ಮತ್ತೆ ಶ್ರೀ ಶಾರದಾಂಬೆಯ ಕೃಟಾಕ್ಷವಿರಲಿತ್ತೇಳಿ ಸಂಗಾತಿ ಶುಭ ಹಾರೈಸಿದೆ.

*-ಸಂಪಾದಕಿ*

## ಪ್ರಕಟಣೆ :

***ಸಂಗಾತಿಗೆ ಚಂದ ಹಣ ಕಳ್ಸಿರು ಸಹ ನಿಮಿಗೆ ರಶೀತಿ ಹಾಕಿಕೆ ಆತಿಲ್ಲೆ. ವಿವರ ಸಿಕ್ಕುದಿಲ್ಲೆ. ದಯವಿಟ್ಟು ತಿಳ್ಸೊಕ್ಕು.***

1. ಕೆ. ಎಸ್. ಶಾರದ, ಹಾರ್ಟಿಕಲ್ಚರ್ ಡಿಪಾರ್ಟ್‌ಮೆಂಟ್, ಸೋಮವಾರಪೇಟೆ, ಇವು ಪತ್ರಿಕೆ ನಂಬರ್, ಪತ್ರಿಕೆ ಯಾರ ಹೆಸ್ರ್‌ಗೆ ಹೋದೆತ ತಿಳ್ಸಕ್ಕು (ಈ ವಿಳಾಸಕ್ಕೆ ಪತ್ರ ಹಾಕಿರು ಸಹ ಉತ್ತರ ಬಾತಿಲ್ಲೆ.)
2. ಬೈಲೆ ದಾಮೋದರ, ಬೆಂಗಳೂರು, ಇವ್ ಹಣ ಕೊಟ್ಟದ್ದ್ ಮಡಿಕೇರಿ ಬೈತಡ್ಕ ಜಾನಕಿಯವರ ಹತ್ರ. ಇವು [illegible]ರ ಹೆಸ್ರ್‌ಗೆ ಮತ್ತೆ ನಮ್ಮ ರಿಜಿಸ್ಟರ್ ನಂಬರ್ ತಿಳ್ಸಿರೆ ಒಳ್ಳೇದ್ (ಇವರ ಮನೆಯವುಕ್ಕೆ ಮೂರ್ನಾಡಿಗೆ [illegible] ಬರ್ದರು ಸಹ ಉತ್ತರ [illegible]ತಿಲ್ಲೆ.)
3. 15-2-2002ಲ್ಲಿ ರೂ. 150/- M.O. ಸಂಗಾತಿಗೆ ಬಾತ್. ಅದರ್ಲಿ ವಿವರ ಯಾವ್ದು ಇಲ್ಲೆ. ಪೋಸ್ಟ್ ಆಫೀಸ್‌ನವು ಸಹ ವಾಪಾಸು ಕಳ್ಸಿದ ಕಾರಣ ವಿವರ ಸಿಕ್ಕ್‌ತ್‌ಲ್ಲೆ. 10-2-2002ರ ಸುಮಾರಿಗೆ M.O.ಕಳ್ಸಿದವುಕ್ಕೆ ರಶೀತಿ ಬಾರದಿದ್ದರೆ ಅಂತವು ನಮಿಗೆ ಪೂರ್ಣ ವಿವರ ಸಹಿತ ತಿಳ್ಸೊಕ್ಕು.

*- ವ್ಯವಸ್ಥಾಪಕ*

## ಶುಭ ವಿವಾಹ

ಮರಗೋಡು ಗ್ರಾಮದ ಬಿದುರು ಪಣೆ ರಾಮಪ್ಪನವರ ಪುತ್ರಿ ಪ್ರಮೀಳಾಳಿಗೂ ಹಾಗೂ ಕುಶಾಲನಗರ ನಿವಾಸಿ ಕುಕ್ಕುನೂರು ಡಿ. ಗಣಪತಿ, ರಿಟೈರ್ಡ್, ಪಾರೆಸ್ಟರ್ ಇವರ ಪುತ್ರ ಅಶೋಕ್ (ಸಂಜು) ವಿಗೂ ದಿನಾಂಕ 9-5-2002 ರಂದು ಮಡಿಕೇರಿಯಲ್ಲಿರುವ ಮೇಲಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ಕಳೆಯಿತ್ತೆಂದು ತಿಳಿದು ಬಂದಿದೆ.

*-ಬಿದಿರುಪಣೆ ಜನಾರ್ಧನ*

## ಅಭಿನಂದನೆ

2001-2002ಸಾಲಿನ 7ನೇ ತರಗತಿಯ ಪಬ್ಲಿಕ್ ಪರೀಕ್ಷೆಯಲ್ಲಿ ಮಡಿಕೇರಿ ಸಂತ ಜೋಸೇಫರ ಶಾಲೆಯ ಪ್ರೀತು ಶೇ.96.17 ರಷ್ಟು ಅಂಕಗಳಿಸಿ ತೇರ್ಗಡೆ ಹೊಂದಿದ್ದಾಳೆ. ಇವಳು ದೇಚೂರಿನ ಉಡುದೋಳಿರ ರಮೇಶ್ ಹಾಗೂ ಸುಮಾ ದಂಪತಿಯರ ಪುತ್ರಿಯಾಗಿದ್ದಾಳೆ.

*- ಸಂಗಾತಿ*

## ಅಭಿನಂದನೆ

ವೀರಾಜಪೇಟೆಯ ಸಂತ ಅನ್ನಮ್ಮ ಪದವಿ ಪೂರ್ವ ಕಾಲೇಜಿನ ವಿಜ್ಞಾನ ವಿಭಾಗದಲ್ಲಿ ಕೊಡಗು ಜಿಲ್ಲೆಗೆ ದ್ವಿತೀಯ ಸ್ಥಾನ (89.83%)ಹಾಗೂ ಸಿ. ಇ. ಟಿ. ಪರೀಕ್ಷೆಯಲ್ಲಿ 719 ರ್‍ಯಾಂಕನ್ನು ದಂಬೆಕೋಡಿ ಸುಬ್ರಮಣ್ಯ ಅಯ್ಯಪ್ಪನವರು ಪಡೆದಿರುತ್ತಾರೆ. ಇವರು ದಂಬೆಕೋಡಿ ಸುಬ್ರಮಣ್ಯ ಹಾಗೂ ಸುಶೀಲನವರ ಪುತ್ರನಾಗಿರುತ್ತಾನೆ.

*- ಸಂಗಾತಿ*

### ಭಾರತೀಯ ವಾಯುಪಡೆಯಲ್ಲಿ ಏರ್‌ಮನ್ ನಾನ್ ಟೆಕ್ನಿಕಲ್ ಹುದ್ದೆಗೆ ಅರ್ಜಿ ಆಹ್ವಾನ

ಎಸೆಸೆಲ್ಸಿ ತತ್ಸಮಾನದಲ್ಲಿ ಶೇ.45 ಅಂಕ ಪಡೆದು ಇಂಗ್ಲೀಷ್ ವಿಷಯದಲ್ಲಿ ಕನಿಷ್ಠ ತೇರ್ಗಡೆಯಾಗಿರುವ 1.1.84 ರಿಂದ 31.5.87ರೊಳಗೆ ಜನಿಸಿರುವ 152.5ಸೆಂ. ಮೀ. ಎತ್ತರವಿದ್ದು ಎದೆಯ ಸುತ್ತಳತೆ 75ಸೆಂ.ಮೀ. 80ಸೆಂ.ಮೀ. ಇರುವ ಅರ್ಹ ಅಭ್ಯರ್ಥಿಗಳಿಂದ ಭಾರತೀಯ ವಾಯುಪಡೆಯಲ್ಲಿ ಏರ್‌ಮನ್ ನಾನ್ ಟೆಕ್ನಿಕಲ್ (ಗ್ರೂಪ್- ವೈ) ಹುದ್ದೆಗಳಿಗೆ ಅರ್ಜಿ ಆಹ್ವಾನಿಸಿದ್ದಾರೆ.

ಅರ್ಜಿಗಳನ್ನು10.6.2002 ರೊಳಗೆ ಪ್ರೆಸಿಡೆಂಟ್ ಏರ್‌ಮನ್ ಸೆಲೆಕ್ಷನ್ ಬೋರ್ಡ್ ಬಾಕ್ಸ್ ನಂ. 11807,ನವದೆಹಲಿ110010 ಇವರಿಗೆ ಸಲ್ಲಿಸಲು ಸೂಚಿಸಿದೆ.

Reg. No. KA/SK/MYS-88 Registered : 10-01-96 TCI Kar. 09592

23-5-2002ರಲ್ಲಿ ಮಂಡ್ಯದಲ್ಲಿ ಜರುಗಿದ ಕಾವೇರಿ ಉತ್ಸವಕ್ಕೆ ಕೆಪಿಸಿಸಿ ಸದಸ್ಯ ಎಸ್. ಎಂ. ಶಂಕರ್ ಕೊಂಬು ಕಹಳೆಯೊಂದಿಗೆ ಚಾಲನೆ ನೀಡುತ್ತಿರುವುದು ಉತ್ಸವದ ವಿವಿಧ ದೃಶ್ಯಾವಳಿಗಳು - ಸಂಗಾತಿ













Kodagu Sangathi Kannada Fortnightly Edited, Published, Printed by Pattada Sheelamani, Doddanna Buildings, Hunsur Road, Hinkal Post, Mysore - 570017. ☎ : 0821/404290. And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.